

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ಸಂಶೋಧನ ನಿಬಂಧ

# ಶ್ರೀಕೃಷ್ಣ ಆಲನಹಳ್ಳಿಯವರ ಕಾದಂಬರಿಗಳ ಆಧಾರಿತ ಚಲನಚಿತ್ರಗಳು: ಅಂತರ್ ಪ್ರಕಾರ ಅಧ್ಯಯನ


**ರವಿಕುಮಾರ್.ಎಂ**

ಸಂಶೋಧನಾ ವಿದ್ಯಾರ್ಥಿ

ನೊಂದಣಿ ಸಂಖ್ಯೆ-KVMB/K001

**ಮಾರ್ಗದರ್ಶಕರು**

**ಡಾ. ಕೆ.ವೈ ನಾರಾಯಣಸ್ವಾಮಿ**

ಸಹಪ್ರಾಧ್ಯಪಕರು,ಕನ್ನಡ ವಿಭಾಗ ಸರ್ಕಾರಿ ಕಲಾ ಕಾಲೇಜು, ಬೆಂಗಳೂರು.



**ಕಾವ್ಯಮಂಡಲ**

ನಂ. 13/85, ರಾಷ್ಟ್ರೀಯ ವಿದ್ಯಾಲಯ ರಸ್ತೆ,

ಬಸವನಗುಡಿ, ಬೆಂಗಳೂರು – 560 004

2011–12



ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕನ್ನಡ ವಿಶ್ವವಿದ್ಯಾಲಯಕ್ಕೆಎಂ.ಫಿಲ್. ಪದವಿಗಾಗಿ ಅರ್ಪಿಸಿದ ಸಂಶೋಧನಾ ನಿಬಂಧ

# ಶ್ರೀಕೃಷ್ಣ ಆಲನಹಳ್ಳಿಯವರ ಕಾದಂಬರಿಗಳ ಆಧಾರಿತ ಚಲನಚಿತ್ರಗಳು: ಅಂತರ್ ಪ್ರಕಾರಅಧ್ಯಯನ

ರವಿಕುಮಾರ್.ಎಂ

ಸಂಶೋಧನಾ ವಿದ್ಯಾರ್ಥಿ

ನೊಂದಣಿ ಸಂಖ್ಯೆ-KVMB/K001

ಮಾರ್ಗದರ್ಶಕರು

ಡಾ. ಕೆ.ವೈ ನಾರಾಯಣಸ್ವಾಮಿ

ಸಹಪ್ರಾಧ್ಯಪಕರು,ಕನ್ನಡ ವಿಭಾಗ ಸರ್ಕಾರಿ ಕಲಾ ಕಾಲೇಜು, ಬೆಂಗಳೂರು.

ಕಾವ್ಯಮಂಡಲ

ನಂ. 13/85, ರಾಷ್ಟ್ರೀಯ ವಿದ್ಯಾಲಯರಸ್ತೆ,

ಬಸವನಗುಡಿ, ಬೆಂಗಳೂರು – 560 004

2011–12

# ದೃಢೀಕರಣ ಪತ್ರ

ಕಾವ್ಯ ಮಂಡಲ ಬೆಂಗಳೂರು, ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಯಲಕ್ಕೆ 2011–12 ನೇ ಸಾಲಿನ ಎಂ.ಫಿಲ್ ಪದವಿಗಾಗಿ "ಶ್ರೀಕೃಷ್ಣ ಆಲನಹಳ್ಳಿಯವರ ಕಾದಂಬರಿಗಳ ಆಧಾರಿತ ಚಲನಚಿತ್ರಗಳು: ಅಂತರ್ ಪ್ರಕಾರ ಅಧ್ಯಯನ " ಎಂಬ ನಿಬಂಧವನ್ನು ರವಿಕುಮಾರ್.ಎಂ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ನಿಬಂಧವು ವಿದ್ಯಾರ್ಥಿಯ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರೀಸುತ್ತೇನೆ.

ದಿನಾಂಕ: 28 - 07 - 2013

ಸ್ಥಳ: ಬೆಂಗಳೂರು

ಡಾ.ಕೆ.ವೈ.ನಾರಾಯಣಸ್ವಾಮಿ

ಸಹಪ್ರಾಧ್ಯಪಕರು, ಕನ್ನಡವಿಭಾಗ, ಸರ್ಕಾರಿ ಕಲಾ ಕಾಲೇಜು,

ಬೆಂಗಳೂರು

## ಪ್ರಮಾಣ ಪತ್ರ

ಕಾವ್ಯ ಮಂಡಲ ಬೆಂಗಳೂರು. ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಯಲಕ್ಕೆ 2011–12 ನೇ ಸಾಲಿನ ಎಂ.ಫಿಲ್ ಪದವಿಗಾಗಿ "ಶ್ರೀಕೃಷ್ಣ ಆಲನಹಳ್ಳಿಯವರ ಕಾದಂಬರಿಗಳ ಆಧಾರಿತ ಚಲನಚಿತ್ರಗಳು: ಅಂತರ್ ಪ್ರಕಾರ ಅಧ್ಯಯನ" ಎಂಬ ನಿಬಂಧವನ್ನು ಕೆ.ವೈ ನಾರಾಯಣಸ್ವಾಮಿರವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ ಸಲ್ಲಿಸುತ್ತಿದ್ದೆನೆ.

ಈ ನಿಬಂಧವು ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

Ravi Kumar M

ದಿನಾಂಕ: 28-07-2013

ರವಿಕುಮಾರ್.ಎಂ

ಸ್ಥಳ: ಬೆಂಗಳೂರು

ಸಂಶೋಧನ ವಿದ್ಯಾರ್ಥಿ

# ಪರಿವಿಡಿ


| | | ಪುಟ ಸಂಖ್ಯೆ |
|---|---|---|
| ಅಧ್ಯಾಯ-1 | ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ | 1-7 |
| ಅಧ್ಯಾಯ-2 | ಕನ್ನಡ ಸಾಹಿತ್ಯ ಮತ್ತು ಕನ್ನಡ ಚಲನಚಿತ್ರದ ಸಂಬಂಧ | 8-24 |
| | 2.1 ಕನ್ನಡ ಸಾಹಿತ್ಯ ಮತ್ತುಕನ್ನಡ ಚಲನಚಿತ್ರದಅಂತರ್ ಸಂಬಂಧ | |
| | 2.2 ಕನ್ನಡ ಸಾಹಿತ್ಯ ಕೃತಿಗಳನ್ನು ಆಧಾರಿತ ಚಲನಚಿತ್ರಗಳ ಸಂಕ್ಷಿಪ್ತ ಪರಿಚಯ | |
| | 2.3 ಚಲನಚಿತ್ರದ ಮಹತ್ವ | |
| ಅಧ್ಯಾಯ-3 | ಸಾಹಿತ್ಯಕೃತಿ ಆಧಾರಿತ ಚಲನಚಿತ್ರ ಮಾಡುವಾಗ ಎದುರಾಗುವಾಗ ಸವಾಲುಗಳು ಮತ್ತು ಸಾಧ್ಯತೆಗಳು | 25-44 |
| | 3.1 ಸಾಹಿತ್ಯಕೃತಿ ಆಧಾರಿತ ಚಲನಚಿತ್ರ ಮಾಡುವಾಗ ಎದುರಾಗುವ ಸವಾಲುಗಳು | |
| | 3.2 ಸಾಹಿತ್ಯಕೃತಿ ಆಧಾರಿತ ಚಲನಚಿತ್ರ ಮಾಡುವಾಗ ಇರುವ ಸಾಧ್ಯತೆಗಳು | |
| ಅಧ್ಯಾಯ-4 | ಶ್ರೀಕೃಷ್ಣ ಆಲನಹಳ್ಳಿಯವರ ಕಾದಂಬರಿಗಳು ಹಾಗು ಕಾದಂಬರಿಗಳನ್ನು ಆಧಾರಿತ ಚಲನಚಿತ್ರಗಳ ತೌಲನಿಕ ಅಧ್ಯಯನ | 45-62 |
| ಅಧ್ಯಾಯ-5 | ಸಮಾರೋಪ | 63-69 |
| ಅನುಬಂಧ-1 | ಶ್ರೀಕೃಷ್ಣ ಆಲನಹಳ್ಳಿಯವರ ಪರಿಚಯ | 70-71 |
| ಅನುಬಂಧ-2 | ಚಲನಚಿತ್ರಗಳ ಕೆಲವು ಛಾಯಚಿತ್ರಗಳು | 72-77 |
| ಪ್ರಾಥಮಿಕ ಆಕರಗಳು | | 78 |
| ಪರಾಮರ್ಶನ ಗ್ರಂಥಗಳು | | 79-80 |

# ಅಧ್ಯಾಯ–1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪೀಠಿಕೆ:**

ಕನ್ನಡ ಸಾಹಿತ್ಯಕ್ಕೂ ಕನ್ನಡ ಸಿನಿಮಾಕ್ಕೂ ಐವತ್ತು ವರ್ಷಕ್ಕೂ ಮಿಗಿಲಾದ ಸಂಬಂಧವಿದೆ. ಕನ್ನಡ ಸಾಹಿತ್ಯ ಸಿನಿಮಾದೊಂದಿಗೆ ಬೆಸೆದುಕೊಂಡ ನಂಟು ಹಲವು ಬಗೆಯದ್ದು. ಜನತೆಯ ಮನರಂಜನೆಯ ಮುಂಚೂಣಿಯಲ್ಲಿರುವ ಸಿನಿಮಾ ಮಾಧ್ಯಮ ಕನ್ನಡ ಸಾಹಿತ್ಯದಿಂದ ಹಲವು ಬಗೆಯ ಸ್ಫೂರ್ತಿಯನ್ನು ಪಡೆದಿದೆ. ಮೂಕಿ ಚಿತ್ರ, ಕಪ್ಪು-ಬಿಳುಪು ಸಿನಿಮಾದಿಂದ ಹಿಡಿದು ತ್ರೀಡೀ ಚಿತ್ರದವರೆಗೆ ಸಿನಿಮಾ ಕ್ಷೇತ್ರ ಇಂದು ಬೆಳೆದಿದೆ.

ಸಾಹಿತ್ಯ ಸಿನಿಮಾವಾಗುವಾಗ ಬಹಳಷ್ಟು ಎಚ್ಚರಿಕೆಯಿಂದ ನಿರ್ಮಿಸಬೇಕಾಗುತ್ತದೆ. ಯಾಕೆಂದರೆ ಸಾಹಿತ್ಯಕ್ಕೆ ತನ್ನದೆ ಮೌಲ್ಯವಿರುತ್ತದೆ. ಅದನ್ನ ಹಾಗೆಯೆ ಕಾಪಾಡಿಕೊಳ್ಳಬೇಕಾಗುತ್ತದೆ. ಸಾಹಿತ್ಯವನ್ನು ಅದರ ಭಾವ, ಅರ್ಥವನ್ನು ಬಿಟ್ಟು ಮತ್ತೇನನ್ನೋ ಅರ್ಥವಾಗಿಸುವ, ಸೇರಿಸುವ ಬರದಲ್ಲಿ ಸಾಹಿತ್ಯದ ಮೌಲ್ಯ ಕಳೆದು ಹೋಗುವ ಸಂದರ್ಭವೂ ಇರುತ್ತದೆ. ಹಾಗಾಗಿ ಸಾಹಿತ್ಯವನ್ನು ಮತ್ತೊಂದು ರೂಪವಾಗಿಸುವಾಗ ಅಥವಾ ಸಿನಿಮಾವಾಗಿಸುವಾಗ ಮನರಂಜನೆಯ ಉದ್ದೇಶವಿದ್ದರು ಬಹಳ ಎಚ್ಚರಿಕೆಯಿಂದ ನಿರ್ಮಿಸಬೇಕಾಗುತ್ತದೆ.

**ಉದ್ದೇಶ ಮತ್ತು ವ್ಯಾಪ್ತಿ:–**

ಕನ್ನಡ ಸಾಹಿತ್ಯ ಕೃತಿಗಳು ಸಿನಿಮಾ ಮಾಧ್ಯಮದಲ್ಲಿ ಹಲವು ತಾಂತ್ರಿಕ ರೂಪಗಳ ಮೂಲಕ ಮರುಹುಟ್ಟು ಪಡೆದು ಯಶಸ್ವಿಯಾದ ಚರಿತ್ರೆ ಇದೆ. ಈ ಅಧ್ಯಯನದ ಉದ್ದೇಶವು ಕೂಡ ಸಾಹಿತ್ಯ ಕೃತಿ ಸಿನಿಮಾ ಕೃತಿಯಾಗಿ ಹೇಗೆ ಸಮಾಜ ವಿಮರ್ಶೆಯ ಸಾಧನವಾಗುವ ರೀತಿಗಳನ್ನು ಹಾಗು ಸಿನಿಮಾ ಮಾಧ್ಯಮದಲ್ಲಿ ಅದು ಪಡೆಯುವ ರೂಪಾಂತರಗಳನ್ನು ಚರ್ಚಿಸುತ್ತದೆ. ಸಾಹಿತ್ಯ ಕೃತಿಯೊಂದು ಹೊಸ ಪಠ್ಯವಾಗಿ ಅನೇಕ ಅರ್ಥ ಸಾಧ್ಯತೆಗಳನ್ನು ಪಡೆಯುವ ರೀತಿಯನ್ನು ಈ ಅಧ್ಯಯನ ಶೋಧಿಸಲೆತ್ನಿಸುತ್ತದೆ. ಸಾಹಿತ್ಯ ಲೋಕದಲ್ಲಿ ಚಿಂತನ ಪರವಾದ, ಪ್ರಗತಿಪರ, ಆರೋಗ್ಯಕರ ಆಶಯಗಳುಳ್ಳ ಹಲವಾರು ಕೃತಿಗಳಿವೆ. ಅವುಗಳನ್ನು ಜನತೆಗೆ ಮುಟ್ಟಿಸಬಲ್ಲ ಸದಭಿರುಚಿಯ ಚಿತ್ರಗಳು ಆಗಾಗ್ಗೆ ಸೃಷ್ಟಿಯಾಗಿವೆ. ಚಲನಚಿತ್ರಗಳು ಕೊಡುವ ಸಂದೇಶಗಳು ಜನರನ್ನು ನೇರವಾಗಿ ಮುಟ್ಟುವುದರಿಂದ ಇಂತಹ ಸಿನಿಮಾ ಮಾಧ್ಯಮದ ಜವಾಬ್ದಾರಿಯನ್ನು ನಾವಿಂದು ಗಂಭೀರವಾಗಿ ಚರ್ಚಿಸಬೇಕಾಗಿದೆ.

ಸಾಹಿತ್ಯ ಕೃತಿಯೊಂದು ಸಿನಿಮಾ ಮಾಧ್ಯಮದಲ್ಲಿ ಮರು ಸೃಷ್ಟಿಯಾದಾಗ ಪಡೆಯಬಲ್ಲ ಜನಪ್ರಿಯತೆ, ಆ ಕೃತಿಯ ಆಶಯ ಹಾಗೂ ಅದು ಜನರ ಅಭಿರುಚಿಯನ್ನು ಹೊಸ ರೀತಿಯಲ್ಲಿ ರೂಪಿಸುವ ಸಾಧ್ಯತೆಗಳನ್ನು ಗ್ರಹಿಸುವ ಪ್ರಯತ್ನವೇ ಈ ಅಧ್ಯಯನದ ಉದ್ದೇಶವಾಗಿದೆ. ಶ್ರೀ ಕೃಷ್ಣ ಆಲನಹಳ್ಳಿಯವರ ಮೂರು ಕಾದಂಬರಿಗಳಾದ 'ಕಾಡು', 'ಪರಸಂಗದ ಗೆಂಡೆತಿಮ್ಮ', 'ಭುಜಂಗಯ್ಯನ ದಶಾವತಾರಗಳು' ಸಿನಿಮಾಗಳಾಗಿ ಯಶಸ್ವಿಯಾಗಿವೆ. ಒಂದು ಸಾಹಿತ್ಯ ಕೃತಿ ಸಿನಿಮಾ ಆದ ಸಂದರ್ಭದಲ್ಲಿ ನಿರ್ದೇಶಕರು, ಕಥಾ ಲೇಖಕರು ಯಾವ ರೀತಿಯಲ್ಲಿ ಬದಲಾವಣೆಯನ್ನು ಯಾಕೆ? ಹೇಗೆ? ಮಾಡಿಕೊಳ್ಳುತ್ತಾರೆ ಎಂಬ ಅಂಶಗಳನ್ನು ಈ ಪ್ರಬಂಧ  ಅರಿಯಲೆತ್ನಿಸುತ್ತದೆ. ನೂರಾರು ಪುಟಗಳ ಸಾಹಿತ್ಯ ಕೃತಿಯನ್ನು ಎರಡು ಅಥವಾ ಮೂರು ಘಂಟೆಯ ಅವಧಿಯೊಳಗೆ ದೃಶ್ಯ ಮಾಧ್ಯಮವಾಗಿಸುವಾಗ ನಿರ್ದೇಶಕ ಸಿನಿಮಾ ತಾತ್ವಿಕತೆಗೆ, ಮಾಧ್ಯಮದ ಒತ್ತಡ, ಮನರಂಜನೆಯ ಉದ್ದೇಶ, ಇತ್ಯಾದಿಗಳಿಗೆ ಅನುಗುಣವಾಗಿ ಹೇಗೆ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾನೆ ಎಂಬುದನ್ನು ಅರಿಯುವ ಪ್ರಯತ್ನ ಈ ಅಧ್ಯಯನದ್ದಾಗಿದೆ.

ಶ್ರೀಕೃಷ್ಣ ಆಲನಹಳ್ಳಿಯವರ ಮೂರು  ಕಾದಂಬರಿಗಳಲ್ಲಿ ಆಧುನಿಕತೆ, ಗ್ರಾಮ ಸಮಾಜ,ಹೊಸ ಪರಿವರ್ತನೆಗಳು, ಬದಲಾಗುತ್ತಿರುವ ಸಾಂಪ್ರದಾಯಿಕ ಸಮಾಜ, ಊಳಿಗಮಾನ್ಯದ ಬಿಕ್ಕಟ್ಟುಗಳು, ಗಂಡು ಹೆಣ್ಣಿನ ಸಂಬಂಧದ ಸಂಕೀರ್ಣ ಮುಖಗಳು ಇತ್ಯಾದಿ ಸಮಕಾಲಿನ ಬಿಕ್ಕಟ್ಟುಗಳು ಸಿನಿಮಾ ಮಾಧ್ಯಮದಲ್ಲಿ ಪರಿಣಾಮಕಾರಿಯಾಗಿ ಶೋಧಿತವಾಗಿವೆ. ಆ ಕಾರಣದಿಂದಲೆ ಈ ಮೂರು ಕಾದಂಬರಿಗಳು ಹಲವು ರೀತಿಯ ಯಶಸ್ಸುಗಳನ್ನು ಪಡೆದಿವೆ. ಕನ್ನಡ ಸಿನಿಮಾ ಪ್ರಪಂಚವು ಆಲನಹಳ್ಳಿಯವರ ಕೃತಿಗಳನ್ನು ವ್ಯಾಖ್ಯಾನಿಸುವ ರೀತಿ ಹಲವು ಬಗೆಯ ವಿಮರ್ಶೆಗಳಿಗೂ ಒಳಗಾಗಿದೆ. ಪರಂಪರೆ ಮತ್ತು ಗ್ರಾಮ ಸಮಾಜದ ಪರಿವರ್ತನೆಗಳನ್ನು ಶ್ರೀ ಕೃಷ್ಣ ಆಲನಹಳ್ಳಿಯವರು ನೋಡುವ ಕ್ರಮ ವಿಭಿನ್ನವಾದುದು. ವಿವಿಧ ಜೀವನ ಮಾರ್ಗಗಳು ಹಾಗೂ ಮೌಲ್ಯಗಳ ಸಂಘರ್ಷಗಳು ಮಾನವ ಬದುಕನ್ನು ಹಾಗೂ ಸಮಾಜವನ್ನು ದುರಂತಕ್ಕೆ ತಳ್ಳುವ ರೀತಿಯನ್ನು ನಾವು ಆಲನಹಳ್ಳಿಯವರ ಕೃತಿಗಳಲ್ಲಿ ಕಾಣುತ್ತೇವೆ. ಈ ವಸ್ತುಗಳನ್ನು ಸಿನಿಮಾ ರೂಪದಲ್ಲಿ ಮರು ಶೋಧನೆಗೆ ಒಳಪಡಿಸಿದಾಗ ಹೊಸ ಸತ್ಯಗಳು ಪ್ರತಿಫಲಿತಗೊಂಡಿವೆ. ಈ ಪ್ರತಿಫಲನಗಳ ಸ್ವರೂಪವನ್ನು ವಿವಿಧ ಅಧ್ಯಾಯಗಳಲ್ಲಿ ವಿಶ್ಲೇಷಿಸುವುದು ಈ ಅಂತರ್ ಪ್ರಕಾರ ಅಧ್ಯಯನದ ಉದ್ದೇಶವಾಗಿದೆ.

ಶ್ರಿಕೃಷ್ಣ ಆಲನಹಳ್ಳಿರವರ ಕಾದಂಬರಿಗಳು ಸಹ ವಿಭಿನ್ನವಾಗಿರುವಂತಹುದು. ಆ ನಿಟ್ಟಿನಲ್ಲಿ ಪಾರಂಪರಿಕ ಸಮಾಜ, ಆಧುನಿಕ ಸಮಾಜಗಳ ಮುಖಾಮುಖಿಯೊಂದಿಗೆ ಸಮಾಜದಲ್ಲಾಗುವ ಬದಲಾವಣೆಗಳನ್ನು ಕಾದಂಬರಿಗಳಲ್ಲಿ ಲೇಖಕರು ಕಟ್ಟಿಕೊಡುತ್ತಾರೆ. ಆಧುನಿಕ ಸಮಾಜದ ಪ್ರವೇಶದಿಂದಾಗಿ ಸಾಂಪ್ರದಾಯಿಕ ಸಮಾಜದಲ್ಲಾಗುವ ಸ್ಥಿತ್ಯಂತರಗಳು ಭಿನ್ನವಾಗಿವೆ. ಉದಾಹರಣೆಗೆ, 'ಪರಸಂಗದ ಗೆಂಡೆತಿಮ್ಮ'

ಕಾದಂಬರಿಯಲ್ಲಿ ಯಾವುದೇ ರೀತಿಯ ಆಧುನಿಕತೆಯ ಸ್ಪರ್ಷವಿಲ್ಲದಿರುವ ಗೌವಳ್ಳಿಗೆ ಗೆಂಡೆತಿಮ್ಮನ ವ್ಯಾಪಾರ ಹಾಗು ನಗರ ಸಂಪರ್ಕ ಮತ್ತು ಹೆಂಡತಿಯ ಪ್ರವೇಶದಿಂದಾಗಿ ಆಧುನಿಕ ವಸ್ತುಗಳು ಒಂದೊಂದಾಗಿ ಹಳ್ಳಿಗೆ ಪ್ರವೇಶ ಪಡೆದು ಹಳ್ಳಿಯ ಬದುಕಲ್ಲಿ ಉಂಟಾದ ಪಲ್ಲಟಗಳನ್ನು ಇ ಕಾದಂಬರಿ ಚಿತ್ರಿಸುತ್ತದೆ. ಇಡೀ ಹಳ್ಳಿಯೇ ಆಧುನಿಕತೆಯ ಪ್ರಕ್ರಿಯೆಗೆ ಒಳಗಾಗುತ್ತದೆ. ಆ ನಿಟ್ಟಿನಲ್ಲಿ ಸಂಸಾರಗಳಲ್ಲಿ ಬಿರುಕುಗಳು ಏರ್ಪಡುತ್ತವೆ. ಮಗ ಹೆಂಡತಿಯು ಈ ಆಧುನಿಕತೆಗೆ ಒಪ್ಪಿ ತಾಯಿಯ ಮಾತನ್ನು ಗಮನಕ್ಕೆ ತೆಗೆದುಕೊಳ್ಳದೆ ಹೋದಾಗ ಅತ್ತೆ–ಸೊಸೆಯರ ಜಗಳವಾಗಿ ಇಡೀ ಸಂಸಾರ ಮನಸ್ತಾಪದ ಮುದ್ದೆಯಾಗುತ್ತದೆ. ಇವೆಲ್ಲವೂ ಕೂಡ ಆಧುನಿಕತೆಯ ಆಗಮನದಿಂದಾಗಿ ಉಂಟಾದ ಬಿಕ್ಕಟ್ಟುಗಳೇ ಆಗಿವೆ.

ಈ ರೀತಿಯ ಆಧುನಿಕತೆಯ ಸಂವೇದನೆಗಳನ್ನು ಸಿನಿಮಾವಾಗಿಸುವ ಸಂದರ್ಭದಲ್ಲಿ ನಿರ್ದೇಶಕ ಯಾವ ರೀತಿಯಲ್ಲಿ ಬದಲಾವಣೆಗಳನ್ನು ಹೇಗೆಲ್ಲಾ ಮಾಡಿಕೊಳ್ಳುತ್ತಾನೆ ಎಂಬುದು ಮುಖ್ಯವಾಗುತ್ತದೆ. ಸವಿಸ್ತಾರವಾಗಿ ಹೇಳುವ ಕಾದಂಬರಿಯಲ್ಲಿ ಸನ್ನಿವೇಶಗಳು ಮನಮುಟ್ಟುವಂತೆ ಲೇಖಕರು ಚಿತ್ರಿಸುತ್ತಾರೆ. ಆದರೆ ಅದೇ ಕಾದಂಬರಿ ಸಿನಿಮಾವಾದಾಗ ಆಗುವಂತಹ ಭಿನ್ನತೆಗಳು ಹಲವು ರೀತಿಯಾಗಿರುವುವಂತಹದ್ದು. ಒಂದು ಹಾಡಿನ ಮೂಲಕವೋ, ಸಂಗೀತ ಹಿನ್ನೆಲೆಯಲ್ಲಿಯೋ, ಹತ್ತಾರು ಪುಟಗಳ ಸನ್ನಿವೇಶಗಳನ್ನು ಕೆಲವೇ ನಿಮಿಷಗಳಲ್ಲಿ ದೃಶ್ಯಗಳ ಮೂಲಕ ಸಿನಿಮಾ ಮಾಧ್ಯಮ ಹೇಗೆ ಅತ್ಯಂತ ಪ್ರಭಾವಿಶಾಲಿಯಾಗಿ ಕಾರ್ಯ ನಿರ್ವಹಿಸುತ್ತದೆ. ಕಾದಂಬರಿಯ ಒಟ್ಟು ಆಶಯವನ್ನು ಸಿನಿಮಾವಾಗಿಸುವಾಗ ಬದಲಾವಣೆ ಅನಿವಾರ್ಯವಾಗುತ್ತದೆ. ಇದರಿಂದಾಗಿ ಸಿನಿಮಾದ ಮೌಲ್ಯ ಮತ್ತಷ್ಟು ಹೆಚ್ಚಾಗಲು ಕಾರಣವಾಗುತ್ತದೆ. ಆಧುನಿಕ ಪ್ರಭಾವಕ್ಕೆ ಸಿಲುಕಿದ ತಿಮ್ಮನ ಸಂಸಾರ ದುರಂತಕ್ಕೆ ಒಳಗಾಗುತ್ತದೆ. ಮರಂಕಿ ಗೆಂಡೆತಿಮ್ಮ ಇಬ್ಬರೂ ಆತ್ಮಹತ್ಯೆಗೆ ಶರಣಾಗುತ್ತಾರೆ. ಇಂತಹ ಸೂಕ್ಷ್ಮ ಪ್ರಕ್ರಿಯೆಗಳನ್ನು ಚಿತ್ರ ಹೇಗೆ ಚಿತ್ರಿಸುತ್ತದೆ, ಅವು ಜನರಿಗೆ ಹೇಗೆ ಮುಟ್ಟುತ್ತದೆ ಎಂಬುದನ್ನು ತಿಳಿಯಬೇಕಾಗುತ್ತದೆ.

ಕಾದಂಬರಿಯ ನಿರೂಪಣೆಯ ಶೈಲಿಗೂ, ಸಿನಿಮಾ ನಿರೂಪಣೆಯ ಶೈಲಿಗೂ ಭಿನ್ನತೆ ಇದೆ. ಒಂದಕ್ಕೊಂದು ಹತ್ತಿರದ ಸಾಮ್ಯವಿದ್ದರೂ ಬೇರೆಯದೇ ಲೋಕವನ್ನು ಅವು ಚಿತ್ರಿಸುತ್ತವೆ. 'ಕಾಡು' ಕಾದಂಬರಿಯಲ್ಲಿ ಚಂದ್ರೇಗೌಡನ ಹೆಂಡತಿಯ ಮೇಲೆ ಅತ್ಯಾಚಾರವಾದ ಮೇಲೆ ಚಂದ್ರೇಗೌಡ ಒಬ್ಬನೇ ಹೋಗಿ ತನ್ನ ವಿರೋಧಿಗಳನ್ನು ಕತ್ತರಿಸುತ್ತಾನೆ ಎಂಬುದನ್ನು ಕಾದಂಬರಿಯಲ್ಲಿ ಸೂಚ್ಯವಾಗಿ ತಿಳಿಸಿದರೆ, ಸಿನಿಮಾದಲ್ಲಿ ಇಡಿ ಊರೆ ಹೋಗಿ ವಿರೋಧಿ ಹಳ್ಳಿಯವರನ್ನು ಕೊಲ್ಲುತ್ತಾರೆ. ಇದು ಸಿನಿಮಾದ ಬೆಳವಣಿಗೆಗೆ ಮಾಡಿಕೊಳ್ಳಬೇಕಾದ ಬದಲಾವಣೆಯ ಅವಶ್ಯಕವಾಗಿರುತ್ತದೆ. ಆದ್ದರಿಂದಾಗಿ ಸಿನಿಮಾ ಮತ್ತು ಸಾಹಿತ್ಯದ ಪ್ರತಿಯೊಂದು ವಿಚಾರವೂ ಕೂಡ ಪೂರಕವಾಗಿರುವುದನ್ನು ಕಾಣುತ್ತೇವೆ.

'ಭುಜಂಗಯ್ಯನ ದಶಾವತಾರಗಳು' ಕಾದಂಬರಿಯಲ್ಲಿ ಸುಶೀಲಳು ಸಾವಿಗೀಡಾಗುವುದಿಲ್ಲ. ಭುಜಂಗಯ್ಯ ಮಾತ್ರ ಸಾಯುತ್ತಾನೆ. ಆದರೆ ಸಿನಿಮಾದಲ್ಲಿ ಅವಳೂ ಕೂಡ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಭುಜಂಗಯ್ಯ ಮಾಡುವ ದಶಾವತಾರಗಳನ್ನು ಸಿನಿಮಾದಲ್ಲಿ ಚಿತ್ರಿಸಿಲ್ಲ. ಕೆಲವೇ ಅವತಾರಗಳನ್ನು ಮಾತ್ರ ಸೃಷ್ಟಿಸುತ್ತಾನೆ. ಏಕೆಂದರೆ ಅದಕ್ಕೆ ನಿರ್ದೇಶಕನಿಗೆ ತನ್ನದೆ ಆದಂತಹ ಕಾರಣಗಳಿಂದ ಇಂತಹ ಪ್ರಕ್ರಿಯೆಗಳನ್ನು ಸಿನಿಮಾದಲ್ಲಿ ಭಿನ್ನ ರೀತಿಯಲ್ಲಿ ಚಿತ್ರಿಸುತ್ತಾರೆ. ಹಾಗಾಗಿ ಈ ರೀತಿಯ ಅಂಶಗಳು ಎರಡೂ ಮಾಧ್ಯಮದಲ್ಲಿ ಹೇಗೆ ಬಿಂಬಿತವಾಗಿವೆ ಎಂಬುದನ್ನು ಪರಿಶೀಲಿಸುವ ಕ್ರಮವೇ ಈ ಅಧ್ಯಯನದ ಉದ್ದೇಶವಾಗಿದೆ.

ಕಾದಂಬರಿ ಆಧಾರಿತ ಸಿನಿಮಾ ಎಂದರೆ ಹೊಸಪಠ್ಯ ನಿರ್ಮಾಣದ ಒಂದು ಮಾದರಿಯೇ ಆಗಿರುತ್ತದೆ. ಈ ದೃಷ್ಟಿಯಿಂದ ಸಾಹಿತ್ಯ ಕೃತಿಗಳ ವಸ್ತುಗಳು ಸಿನಿಮಾ ಮಾಧ್ಯಮದಲ್ಲಿ ಪಡೆಯುವ ರೂಪಾಂತರಗಳನ್ನು ಈ ಅಧ್ಯಯನವು ಆಲನಹಳ್ಳಿಯವರ ಕೃತಿಗಳ ಮೂಲಕ ಶೋಧಿಸಲೆತ್ನಿಸುತ್ತದೆ. ದೇಶ ನಿರ್ಮಾಣದಲ್ಲಿ ಸಮೂಹ ಮಾಧ್ಯಮಗಳ ಮಹತ್ವ ಅವರ್ಣನೀಯ. ಇಂದಿನ ಬಿಡುವಿಲ್ಲದ ಬದುಕಿನ ದಿನಚರಿಯಲ್ಲಿ ಪ್ರೇಕ್ಷಕರು ತಾಳ್ಮೆಯಿಂದ ದೃಶ್ಯ ಮಾಧ್ಯಮವನ್ನು ನೋಡಬಲ್ಲರು. ಆದ್ದರಿಂದ ಕನ್ನಡ ಸಾಹಿತ್ಯ ಲೋಕದಲ್ಲಿ ಚಿಂತಾನಪರ ಆಶಯಗಳುಳ್ಳ ಹಲವು ಕೃತಿಗಳು ಇವೆ. ಅವು ಹೊತ್ತಿಗೆಯಲ್ಲಿ ಹೊದ್ದು ಮಲಗುವುದಕ್ಕಿಂತ ಸಿನಿಮಾ ಮಾಧ್ಯಮದ ಮೂಲಕ ಸಂದೇಶ ನೀಡಿ ಎಚ್ಚರಿಸಬೇಕಾದ ಅಗತ್ಯವಿದೆ. ಪ್ರತಿಯೊಂದು ಮಾಧ್ಯಮಕ್ಕೂ ತನ್ನದೇ ಆದಂತಹ ಪ್ರಾಮುಖ್ಯತೆ ಇರುತ್ತದೆ. ಆ ನಿಟ್ಟಿನಲ್ಲಿ ಸಿನಿಮಾ ಮಾಧ್ಯಮಕ್ಕಿರುವ ಪ್ರಭಾವ ಉತ್ತಮವಾಗಿರುವಂತಹದ್ದು. ಏಕೆಂದರೆ ಒಂದು ಸಮಾಜದ ಜನತೆ ಹೆಚ್ಚು ಪ್ರಭಾವಕ್ಕೆ ಒಳಗಾಗುವುದು ಸಿನಿಮಾ ಮತ್ತು ಟಿ.ವಿ ಎಂಬ ಪ್ರಭಾವಿ ದೃಶ್ಯ ಮಾಧ್ಯಮಗಳಿಂದಾಗಿಯೆ. ಉದಾಹರಣೆಗೆ:- ಸಿನಿಮಾ ಸಂಸ್ಕೃತಿಯನ್ನೆ ತೆಗೆದುಕೊಂಡರೆ, ಯಾವುದೇ ನಟ-ನಟಿಯರ ಪ್ರಭಾವಕ್ಕೆ ಒಳಗಾಗುವುದನ್ನು ಕಾಣುತ್ತೇವೆ. ಒಬ್ಬ ನಟನ ವೇಷಭೂಷಣಗಳನ್ನು ಮಾತಿನ ರೀತಿ, ನಡೆ-ನುಡಿಗಳೆಲ್ಲವನ್ನೂ ಸಹ ಅನುಕರಿಸುವ ನಿಟ್ಟಿನಲ್ಲಿ ಹಲವು ಪ್ರೇಕ್ಷಕರು ತೊಡಗುತ್ತಾರೆ. ಹಿಂದಿನ ಕಾಲದ ಸಿನಿಮಾ ನಟರನ್ನು ಮಾದರಿಯಾಗಿಸಿಕೊಂಡ ಎಷ್ಟೋ ಸಂಸಾರಗಳು ಸುಲಲಿತವಾಗಿ ಸಾಗಿರುವುದನ್ನು ಕಂಡಿದ್ದೇವೆ. ಅದೇ ರೀತಿ ಇಂದಿನ ನಟ-ನಟಿಯರನ್ನು ಅನುಕರಿಸುವುದನ್ನೂ ಕೂಡ ಕಾಣುತ್ತಿದ್ದೇವೆ. ಆ ನಿಟ್ಟಿನಲ್ಲಿ ಪ್ರೇಕ್ಷಕ ಒಳ್ಳೆಯದ್ದು, ಕೆಟ್ಟದ್ದು ಎರಡನ್ನೂ ಕೂಡ ಅನುಕರಿಸುತ್ತಿದ್ದಾನೆ. ಅಂದರೆ ಸಿನಿಮಾ ಮಾಧ್ಯಮ ಜನರನ್ನು ಬಹುಬೇಗ ತಲುಪತ್ತದೆ ಎಂದಾಯಿತಲ್ಲವೇ? ಹಾಗಾಗಿ ನಮ್ಮ ಹಿಂದಿನ ಮತ್ತು ಇಂದಿನ ಸಾಹಿತ್ಯಕೃತಿಗಳನ್ನು ಸಿನಿಮಾವಾಗಿಸುವ ಪ್ರಯತ್ನ ಮುಂದುವರೆದಿದ್ದೆ ಆದರೆ ಅದು ಜನರನ್ನು ಬಹುಬೇಗ ಮುಟ್ಟಬಲ್ಲದು.

ಬರಹ ರೂಪದ ಸಾಹಿತ್ಯ ಕೇವಲ ಓದುವ ವರ್ಗಕ್ಕೆ ಅಷ್ಟೇ ಸೀಮಿತವಾಗಿರುತ್ತದೆ. ಆದರೆ ದೃಶ್ಯಮಾಧ್ಯಮ ಅಕ್ಷರಸ್ಥ-ಅನಕ್ಷರಸ್ಥ ಭೇದವಿಲ್ಲದೆ ಸಾಗುತ್ತಿದೆ. ಉತ್ತಮ ಸಾಹಿತ್ಯ ಕೃತಿಗಳು ಸಿನಿಮಾಗಳಾಗಿ ಪರಿವರ್ತನೆಯಾದಾಗ ಸಮಾಜದ ಎಲ್ಲಾ ವರ್ಗದ ಜನರಿಗೂ ಮುಟ್ಟುತ್ತದೆ ಎಂಬುದು ಸರ್ವಸಮ್ಮತ ಅಭಿಪ್ರಾಯವಾಗಿದೆ. ಏಕೆಂದರೆ ಇಂದಿನ ಪ್ರಸ್ತುತ ಸಿನಿಮಾ ಜಗತ್ತನ್ನು ನೋಡಿದರೆ ಕೇವಲ ವ್ಯಾಪರೀಕರಣವಷ್ಟೆ ಕಾಣುತ್ತದೆ. ಜನರಿಗೆ ಬೇಕಾದ್ದು, ಬೇಡವಾದದ್ದು ಎಲ್ಲವನ್ನೂ ಆಕರ್ಷಕವಾಗಿಸಿ ಮನರಂಜನೆಯ ಪ್ರಮುಖ ಅಸ್ತ್ರವೆಂಬಂತೆ ಸಿನಿಮಾ ರೂಪುಗಳೊಳ್ಳುತ್ತಿದೆ. ಒಂದಷ್ಟು ದೃಶ್ಯಗಳು, ಹಾಡು, ಹೊಡೆದಾಟ, ಸ್ಟಾರ್‌ನ ಅಭಿನಯವೇ ಸಿನಿಮಾ ಎಂದಾಗಿರುವ ಸಂದರ್ಭದಲ್ಲಿ ಉತ್ತಮ ಸಿನಿಮಾ ಸಂಸ್ಕೃತಿಯನ್ನು ಪ್ರೇಕ್ಷಕವರ್ಗಕ್ಕೆ ಮುಟ್ಟಿಸಬೇಕಾದ ತುರ್ತು ಇಲ್ಲವಾಗಿದೆ. ಆದ್ದರಿಂದ ಇಂತಹ ತೌಲನಿಕ ಅಧ್ಯಯನದಿಂದಾಗಿ ಜನರಿಗೆ ಬರಿ ಮನರಂಜನೆಯನ್ನು ಅಷ್ಟೆ ಅಲ್ಲದೇ, ಅದರ ಜೊತೆಗೆ ಸಮಾಜದ ಓರೆ-ಕೋರೆಗಳನ್ನು ತಿದ್ದುವಂತಹ ಅವಶ್ಯಕತೆ ಇದೆ. ಹಾಗಾಗಿ ಸಾಹಿತ್ಯ ಸಂಸ್ಕೃತಿಯನ್ನು ಸಿನಿಮಾ ಸಂಸ್ಕೃತಿಯೊಂದಿಗೆ ಬೆಸುಗೆ ಏರ್ಪಡಿಸಿದಾಗ ಈ ಎರಡೂ ಮಾಧ್ಯಮಗಳ ಅಭಿಪ್ರಾಯಗಳು ಬದಲಾವಣೆಗೆ ಸಹಾಯಕವಾಗುತ್ತದೆ. ಅದರ ಮುಖೇನ ಸಮಾಜದ ಬೆಳವಣಿಗೆಗೆ ಕಾರಣವಾಗುತ್ತದೆ. ಸಾಹಿತ್ಯ ಎಂಬುದು ಬರಿ ಪುಸ್ತಕರೂಪದ ಕೃತಿಯಾಗಿರದೇ, ಸಿನಿಮಾರೂಪದಲ್ಲಿ ಜನಮನ ತಲುಪಬೇಕಾದ ಅವಶ್ಯಕತೆ ಇದೆ. ಸಿನಿಮಾ ಸಂಸ್ಕೃತಿ, ಸಾಹಿತ್ಯ ಸಂಸ್ಕೃತಿ ಎರಡೂ ಬೆರೆತಾಗ ಸಮಾಜದಲ್ಲಿನ ಲೋಪಗಳನ್ನು ತಿದ್ದಲು ಸಹಕಾರಿಯಾಗುತ್ತದೆ. ಆದ್ದರಿಂದ ಈ ಅಧ್ಯಯನವು ಪ್ರಾಮುಖ್ಯತೆ ಹೊಂದಿದೆ.

ಕನ್ನಡ ಸಾಹಿತ್ಯ ಕೃತಿಯೊಂದು ಸಿನಿಮಾ ಮಾಧ್ಯಮದಲ್ಲಿ ಪುನರವತರಿಸಿದಾಗ ಪಡೆಯಬಲ್ಲ ಜನಪ್ರಿಯತೆ ಮತ್ತು ಆ ಕೃತಿಯ ಆಶಯದ ಸಾರ್ಥಕತೆ ಜನರ ಅಭಿರುಚಿಯನ್ನು ಪುನರ್ ನಿರ್ಮಿಸಬಲ್ಲ ಸಾಧ್ಯತೆಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವೇ ಈ ಅಧ್ಯಯನದ ಉದ್ದೇಶವಾಗಿದೆ. ಪ್ರಸ್ತುತ ಈ ಅಧ್ಯಯನದಲ್ಲಿ ಶ್ರೀಕೃಷ್ಣ ಆಲನಹಳ್ಳಿಯವರ ಮೂರು ಕಾದಂಬರಿಗಳು ಸಿನಿಮಾಗಳಾಗಿ ಜನಪ್ರಿಯತೆಗಳನ್ನು ಹೊಂದಿವೆ. ಆ ನಿಟ್ಟಿನಲ್ಲಿ ಒಂದು ಸಾಹಿತ್ಯ ಕೃತಿ ಸಿನಿಮಾ ಆದಂತಹ ಸಂದರ್ಭದಲ್ಲಿ ಯಾವ ರೀತಿಯ ಬದಲಾವಣೆಯನ್ನು ಯಾಕೆ? ಹೇಗೆ? ಮಾಡಿಕೊಳ್ಳುತ್ತಾರೆ ಎಂಬ ಪ್ರಶ್ನೆ ಎದುರಾಗುತ್ತದೆ. ಆ ನಿಟ್ಟಿನಲ್ಲಿ ನನ್ನ ಈ ಅಧ್ಯಯನವೂ ಕೂಡ ಕೃತಿ ಸಿನಿಮಾ ಆದಾಗ ಯಾವ ರೀತಿಯ ಬದಲಾವಣೆಗಳನ್ನು ಮಾಡಿಕೊಂಡಿದೆ? ಎಂಬುದನ್ನು ಅಧ್ಯಯನ ಮಾಡುವುದೇ ಆಗಿದೆ. ಯಾಕೆಂದರೆ ನೂರಾರು ಪುಟಗಳ ಸಾಹಿತ್ಯ ಕೃತಿಯನ್ನು ಎರಡೂವರೆ ಘಂಟೆ ಅವದಿಯಲ್ಲಿ ದೃಶ್ಯ ಮಾಧ್ಯಮವಾಗಿಸುವಾಗ ನಿರ್ದೇಶಕ ಸಮಯ, ಸಂದರ್ಭಕ್ಕೆ ಅನುಗುಣವಾಗಿ ಹೇಗೆ ಬದಲಾವಣೆಗಳನ್ನು ಮಾಡಿಕೊಳ್ಳತ್ತಾನೆ ಎಂಬುದನ್ನು ತಿಳಿಯುವ ಪ್ರಯತ್ನವೇ ಈ ಅಧ್ಯಯನದ ಉದ್ದೇಶವಾಗಿದೆ.

ಶ್ರೀಕೃಷ್ಣ ಆಲನಹಳ್ಳಿಯವರ ಮೂರು ಕಾದಂಬರಿಗಳಲ್ಲಿ ಸಹಜವಾಗಿ ಕಾಣುವ ವಿಚಾರ ಆಧುನಿಕತೆಯ ಆಗಮನದಿಂದ ಪಾರಂಪರಿಕವಾಗಿ ಬಂದಿರುವ ಸಮಾಜದ ಮೇಲೆ ಯಾವ ರೀತಿ ಪರಿಣಾಮವನ್ನು ಬೀರಿದೆ ಎಂಬುದನ್ನು ಅಧ್ಯಯನ ಮಾಡ ಬೇಕಾಗಿದೆ. ಶ್ರೀಕೃಷ್ಣ ಆಲನಹಳ್ಳಿಯವರು ಆಧುನಿಕತೆಯನ್ನು ಸ್ವಾಗತಿಸುವ ಕ್ರಮ ಮತ್ತು ನೋಡುವ ದೃಷ್ಟಿ ವಿಭಿನ್ನವಾಗಿರುವಂತದ್ದು. ಸ್ವ-ಇಚ್ಚೆಯಿಂದಲೇ ಆಧುನಿಕತೆಯನ್ನು ಬರಮಾಡಿಕೊಳ್ಳುತ್ತಲೆ ಕೊನೆಯಲ್ಲಿ ದುರಂತಕ್ಕೆ ಒಳಗು ಮಾಡುವುದನ್ನು ಕಾಣುತ್ತೇವೆ. ಈ ರೀತಿಯ ವಸ್ತುವನ್ನು ಸಿನಿಮಾದಲ್ಲಿ ಯಾವ ರೀತಿಯಲ್ಲಿ ಬಿಂಬಿಸುತ್ತಾರೆ? ಅದರ ಸ್ವರೂಪ ಯಾವ ರೀತಿಯದ್ದಾಗಿರುತ್ತದೆ? ಎಂಬುದನ್ನು ತಿಳಿಯುವುದೆ ಈ ಅಧ್ಯಯನದ ಕ್ರಮವಾಗಿದೆ. ಒಟ್ಟಾರೆಯಗಿ ಕನ್ನಡ ಸಾಹಿತ್ಯ ಮತ್ತು ಸಿನಿಮಾಗಳು ಯಾವ ರೀತಿಯಾದಂತಹ ಸಂಬಂಧಗಳನ್ನು ಏರ್ಪಡಿಸಿಕೊಂಡರೆ ಸಿನಿಮಾ ಸಂಸ್ಕೃತಿಯು ಬೆಳೆಯುತ್ತದೆ ಎಂಬುದರ ಪ್ರಾಯೋಗಿಕ ನಿದರ್ಶನಗಳನ್ನು ನೀಡುವಂತಹ ಮಾದರಿ ಈ ಅಧ್ಯಯನದ್ದಾಗಿದೆ.

**ವ್ಯಾಪ್ತಿ :**

ಈ ಅಧ್ಯಯನದಲ್ಲಿ ಈಗಾಗಲೆ ನಡೆದಿರುವಂತಹ ಅಧ್ಯಯನಗಳನ್ನು ಪರಿಶೀಲಿಸುವುದು ಕನ್ನಡ ಸಾರಸ್ವತ ಲೋಕದೊಂದಿಗೆ ಕನ್ನಡ ಸಿನಿಮಾ ಇತಿಹಾಸ ಹಲವಾರು ದಶಕಗಳ ಇತಿಹಾಸದಲ್ಲಿ ಅತ್ಯುನ್ನತ ನಂಟನ್ನು ಒಳಗೊಂಡಿದೆ. ಮೂಕಿಚಿತ್ರಗಳ ಪರ್ವದಿಂದ ಇಂದಿನ ತ್ರೀಡಿ ಚಿತ್ರಗಳವರೆವಿಗು ಸಾರಸ್ವತ ಲೋಕ ಒಂದಲ್ಲ ಒಂದು ರೀತಿಯಲ್ಲಿ ಅದರ ಜೊತೆ ಸಂಬಂಧವನ್ನು ಬೆಳೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಇತಿಹಾಸ ನಿರ್ಮಿಸಿರುವ ಹಲವಾರು ಚಿತ್ರಗಳು ಸಾಹಿತ್ಯ ಕೃತಿಯ ಆಧಾರಿತವಾಗಿರುವುದು ಹೆಮ್ಮೆಯ ವಿಷಯವಾಗುತ್ತದೆ. ಈ ಸಂಶೋಧನೆಯಲ್ಲಿ ಶ್ರೀಕೃಷ್ಣ ಆಲನಹಳ್ಳಿಯವರ ಮೂರು ಕಾದಂಬರಿಗಳು ಹಾಗೂ ಆ ಕೃತಿಗಳನ್ನು ಆಧಾರಿತ ಚಲನಚಿತ್ರಗಳನ್ನಷ್ಟೇ ಅಧ್ಯಯನಕ್ಕೆ ಒಳಪಡಿಸಲು ಯತ್ನಿಸಿದ್ದೇನೆ. ಇದು ಈ ಅಧ್ಯಯನದ ವ್ಯಾಪ್ತಿಯು ಮಿತಿಯು ಆಗಿದೆ.

# ಅಧ್ಯಾಯ-2

# ಕನ್ನಡ ಸಾಹಿತ್ಯ ಮತ್ತು ಕನ್ನಡ ಚಲನಚಿತ್ರದ ಸಂಬಂಧ

## 2.1 ಕನ್ನಡ ಸಾಹಿತ್ಯ ಮತ್ತು ಕನ್ನಡ ಚಲನಚಿತ್ರದ ಅಂತರ್ ಸಂಬಂಧ

**ಕನ್ನಡ ಸಾಹಿತ್ಯ** : ಸಾಹಿತ್ಯವನ್ನು ಸೃಷ್ಟಿ ಮಾಡದ ದೇಶ ಜಗತ್ತಿನಲ್ಲಿ ಯಾವುದು ಇಲ್ಲವೆಂದೆ ಹೇಳಬಹುದು. ಮೌಖಿಕವಾಗಿರಲಿ ಅಥವಾ ಲಿಖಿದ ರೂಪದಲ್ಲಿರಲಿ ಪ್ರತಿಯೊಂದು ದೇಶವು ತನ್ನದೆ ಆದ ಸಾಹಿತ್ಯ ಸೃಷ್ಟಿಯನ್ನು ಸೃಜಿಸುತ್ತಿರುತ್ತದೆ. ಸಾಹಿತ್ಯವನ್ನು ಶಕ್ತಿ ಎಂದು ಕರೆಯುವ ಡಿ.ವಿ.ಜಿ ಯವರು ಸಾಹಿತ್ಯವನ್ನು ಕುರಿತು "ಸಾಹಿತ್ಯ ಎಂದರೆ ಎದೆಯನ್ನು ಅಲುಗಿಸುವಂಥ ಮಾತು. ಯಾವ ವಾಕ್ಯವನ್ನು ಓದಿದರೆ ಅಥವಾ ಕೇಳಿದರೆ ನಮ್ಮ ಹೃದಯದಲ್ಲಿ ಒಂದನೊಂದು ಚಲನೆಯ ಅನುಭವ ಉಂಟಾಗುತ್ತದೆಯೋ ಆ ವಾಕ್ಯವೇ ಸಾಹಿತ್ಯ"[1] ಎಂದು ಹೇಳುತ್ತಾರೆ. ಕನ್ನಡದ ದೈತ್ಯ ಪ್ರತಿಭೆ ಕುವೆಂಪು ರವರು ಸಾಹಿತ್ಯವನ್ನು ಕುರಿತು "ರಸಾನುಭವಕಾರಿಯಾದ ಬರವಣಿಗೆಯೆಲ್ಲವು ಸಾಹಿತ್ಯ ಎಂಬ ಬಿರುದಿಗೆ ಯೋಗ್ಯವಾಗುತ್ತದೆ"[2]ಎಂದು ಹೇಳುತ್ತಾರೆ. ಸಮಾಜದಲ್ಲಿ ವಾಸಿಸುವರಿಗೆ ಕಟ್ಟಡಗಳು, ಆಸ್ಪತ್ರೆಗಳು ಹೇಗೆ ಅವಶ್ಯಕವೋ ಅಂತೆಯೇ ಸಾಹಿತ್ಯ ಕೂಡ ಅತಿ ಅವಶ್ಯಕ ಎಂದು ಭಾವಿಸಿದ್ದರು.

**ಕನ್ನಡ ಸಿನಿಮಾ** : ಸಿನಿಮಾ ಎಂಬುದು ಮಾಯಾಜಾಲವೇ ಸರಿ. ಅಂತಹ ಸಮೂಹ ಮಾಧ್ಯಮ ಪ್ರೇಕ್ಷಕನನ್ನು ಹಿಡಿದಿಡುವಲ್ಲಿ ಯಶಸ್ವಿಯಾಗಿದೆ. ಸಾಹಿತ್ಯದೊಂದಿಗಿನ ಅದರ ಸಂಬಂಧವನ್ನು ಚರ್ಚಿಸಿದಂತೆಲ್ಲ ವಿಶಿಷ್ಟ ಕ್ರಮದಲ್ಲಿ ಸಿನಿಮಾ ಕಾಣುತ್ತದೆ. ಈ ಮಾಯಾಜಾಲ ಸಿನಿಮಾ ಕುರಿತು ಅನಂತಮೂರ್ತಿ ಅವರು "ಚಲಿಸುವ ಚಿತ್ರಗಳ ಮೂಲಕ, ಕಿವಿಯ ಮೂಲಕ, ಸಿನಿಮಾ ನಮಗೆ ಅನುಭವವನ್ನು ಸೃಷ್ಟಿಸಿಕೊಡುತ್ತದೆ. ಕಣ್ಣಿನ ಮೂಲಕ, ಕಿವಿಯ ಮೂಲಕ, ನಮಗೆ ಸ್ಪಷ್ಟವಾಗಿ ಕಂಡದ್ದು ಕೂಡ ದತ್ತ ಪ್ರಪಂಚದ ವಸ್ತು ಮಾತ್ರವಾಗಿ ಉಳಿಯದೆ ಒಂದು ಕಲಾಕೃತಿ ದ್ರವ್ಯವಾಗುವುದೇ ಅಮೂರ್ತವಾದದ್ದನ್ನು ಹೊಳೆಯಿಸುವುದೇ ಸಿನಿಮಾ ನಮಗೆ ಕೊಡುವ ಮಹತ್ವದ ಅನುಭವ".[3] ಎಂದು ಅಭಿಪ್ರಾಯ ಪಡುತ್ತಾರೆ. ರಂಗ ಮಾಧ್ಯಮದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಕೆ.ವಿ ಸುಬ್ಬಣ್ಣ ಅವರು "ವಸ್ತುಗಳ ಚಿತ್ರವನ್ನು ಅವುಗಳ ಚಲನೆಯನ್ನು ಮತ್ತು ಚಿತ್ರಗಳಲ್ಲಿ ಧ್ವನಿಯನ್ನು ತತ್ಪ್ರತಿ ಎನ್ನುವ ಹಾಗೆ ದಾಖಲು ಮಾಡಿಕೊಂಡು ಹಾಗೆ ಪ್ರದರ್ಶಿಸುವುದು ಇದು ತಕ್ಷಣ ಸ್ಥೂಲವಾಗಿ ಹೇಳಬಹುದಾದ ಲಕ್ಷಣ"[4] ಎಂದು ವ್ಯಾಖ್ಯಾನಿಸುತ್ತಾರೆ. ಸಾಹಿತ್ಯ ಮತ್ತು ಸಿನಿಮಾ ಇವೆರಡು ಮಾಧ್ಯಮಗಳು ಒಂದನ್ನೊಂದು ಆಶ್ರಯಿಸಿರುವಂತಹ ಪರಸ್ಪರ ಪೂರಕ ಮಾಧ್ಯಮಗಳು ಎನ್ನಬಹುದು.

"ಸಿನಿಮಾಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಸಾಹಿತ್ಯದ ಸಂಬಂಧ ಇದ್ದೇ ಇದೆ. ಇದು ಸ್ವತಂತ್ರ ಸಾಹಿತ್ಯ ಕೃತಿಯೊಂದಿಗಿನ ಸಂಬಂಧವು ಆಗಬಹುದು. ಸಿನಿಮಾಕ್ಕೆಂದೇ ಸಿದ್ಧವಾದ ಸಾಹಿತ್ಯವಾಗಬಹುದು. ರೂಪಕ ಚಿತ್ರಗಳಿಗೆ ತನ್ನದೇ ಆದ ಒಂದು ಕಥಾ ಹಂದರ ಮುಖ್ಯವಾಗುವುದರಿಂದ ವಿಶಾಲಾರ್ಥದಲ್ಲಿ ಎಲ್ಲಾ ಸಿನಿಮಾಗಳಿಗೂ ಸಾಹಿತ್ಯದ ಅಗತ್ಯ ಬೀಳುತ್ತದೆ. ಸಾಹಿತ್ಯವೆಂದಾಗ ಇಲ್ಲಿ ಕೇವಲ ಶಾಬ್ದಿಕವಾದದ್ದೆಂಬ ನೆಲೆಯಲ್ಲಿ ನೋಡಬೇಕಾಗಿಲ್ಲ. ಯಾಕೆಂದರೆ ಮಾತೇ ಇಲ್ಲದ ರೂಪಕ ಚಿತ್ರದಲ್ಲೂ ತನ್ನದೇ ಆದ ಕಥಾಹಂದರ ಇರುವುದರಿಂದ ಸಿನಿಮಾದಲ್ಲಿ ಸಾಹಿತ್ಯವು ಮಾತಿಲ್ಲದೆ ಸೇರಿಕೊಳ್ಳಲು ಸಾಧ್ಯ!"[5] ಬರಗೂರು ರಾಮಚಂದ್ರಪ್ಪನವರ ಈ ಹೇಳಿಕೆಯನ್ನು ಅವಲೋಕಿಸಿದರೆ, ಸಿನಿಮಾ ಮತ್ತು ಕನ್ನಡ ಸಾಹಿತ್ಯಕ್ಕಿರುವ ಅವಿನಾಭಾವ ಸಂಬಂಧ  ತಿಳಿಸುತ್ತದೆ. ಸಾಹಿತ್ಯ ಎಂಬುದು ಸಿನಿಮಾದ ಮುಖ್ಯಭಾಗ ಕಥಾಹಂದರವಿಲ್ಲದೆ ಸಿನಿಮಾ ನಡೆಯಲು ಸಾಧ್ಯವಿಲ್ಲ ಅದು ನೇರ ಸಾಹಿತ್ಯವಾಗಬಹುದು. ಅಥವಾ ಸಿನಿಮಾಕ್ಕೆಂದೇ ನಿರ್ಮಾಣಗೊಂಡ ಸಾಹಿತ್ಯವಾಗಬಹುದು. ಸಿನಿಮಾ ಎಂದಾಗ ಸಾಹಿತ್ಯದ ಮೌಲ್ಯ ಸಮ ಪ್ರಮಾಣದಲ್ಲಿ ತನ್ನ ನೆಲೆಯನ್ನು ಸ್ಥಾಪಿಸಿ ಕೊಂಡಿರುತ್ತದೆ. ಹಾಗಾಗಿ ಸಿನಿಮಾ ಮತ್ತು ಸಾಹಿತ್ಯದ ಸಂಬಂಧ ಧನಾತ್ಮಕವಾಗಿ ಕಾರ್ಯನಿರ್ವಹಿಸುತ್ತಿರುತ್ತದೆ. ಸಿನಿಮಾವನ್ನು ಸಹ ಸಾಹಿತ್ಯ ಎಂದು ಪರಿಭಾವಿಸುತ್ತಿದ್ದಾರೆ. ಸಾಹಿತ್ಯ ಎಂಬುದು ಕೇವಲ ಲಿಖಿತ ರೂಪವಾಗಿರದೆ ವೈವಿಧ್ಯಮಯ ಅರ್ಥ ಸಾಧ್ಯತೆಗಳನ್ನು ಸೃಷ್ಟಿಸುವ ಕಲಾಪ್ರಕಾರವಾಗಿದೆ. ವ್ಯವಸ್ಥಿತವಾದ ಸೃಜನಶೀಲ ಸಾಹಿತ್ಯ ಸೃಷ್ಟಿ ಬೇರೆಯದೇ ಹೊಸ ಸಾಧ್ಯತೆಗಳನ್ನು ತೋರಿಸುವ ಪ್ರಕ್ರಿಯೆಯಾಗಿ ನಮ್ಮೊಂದಿಗೆ ಇರುವುದನ್ನು ಕಾಣುತ್ತೇವೆ. ಸಿನಿಮಾಕ್ಕೆಂದು ಕಥಾಹಂದರವನ್ನು ವಿಶ್ಲೇಷಿಸಲು ತೊಡಗುವ ಈ ಹೇಳಿಕೆ ಖಂಡಿತ ವಿಭಿನ್ನ ಸಾಧ್ಯತೆಗಳನ್ನು ತೋರುತ್ತದೆ. ಮೂಕಿ ಚಿತ್ರದ ಕಾಲಘಟ್ಟದಲ್ಲೂ ಸಹ ಚಲನಚಿತ್ರಕ್ಕೆ 'ಕತೆ' ಎಂಬುದು ಇತ್ತು. ಆದರೆ ಅದನ್ನು ವಿಶ್ಲೇಷಿಸುವ ಕ್ರಮ ಬೇರೆಯದ್ದೆ ಆಗಿರುತ್ತದೆ. ಹಾಗಾಗಿ ಕತೆ ಎಂಬುದು ಸಾಹಿತ್ಯಕ್ಕಿರಬಹುದು, ಸಿನಿಮಾಕ್ಕಿರಬಹುದು ಅದು ಜೀವಾಳವಾಗಿರುತ್ತದೆ. ಅದರ ಜೊತೆ ಜೊತೆಗೆ ಕಾರ್ಯ ನಿರ್ವಹಿಸುವ ಕ್ರಮ ಬೇರೆಯದ್ದೆ ಆಗಿರುತ್ತದೆ. ಕತೆ ಮತ್ತು ಸಿನಿಮಾ ಜೊತೆ ಜೊತೆಯಾಗಿ ಒಂದಾಗಿ ನಿರ್ವಹಿಸುವ ಕಾರ್ಯ ವಿಭಿನ್ನ ನೆಲೆಗಟ್ಟುಗಳಲ್ಲಿ ಎರಡರ ಸಂಬಂಧವು ಮುನ್ನೆಡೆಯುತ್ತಿರುತ್ತದೆ.

"ಕನ್ನಡದ ಪ್ರಾರಂಭಿಕ ಸಿನಿಮಾಗಳು ಪೂರ್ಣವಾಗಿ ನೇರ ಲಿಖಿತ ಸಾಹಿತ್ಯ ಕೃತಿಗಳನ್ನು ಆಧರಿಸಿಲ್ಲ. ಆದರೆ ಸಿನಿಮಾಕ್ಕೆಂದೇ ರಚಿತವಾದ ಕಲ್ಪಿತ ಕತೆಗಳನ್ನು ಆದರಿಸಿಲ್ಲ. ಅದು ಶಿಷ್ಟ ಸಾಹಿತ್ಯವಿರಬಹುದು; ಜನಪದ ಸಾಹಿತ್ಯವಿರಬಹುದು. ಅವುಗಳ ಓದು ಆಥವಾ ಗ್ರಹಿಕೆಯ ಫಲಿತವಾಗಿ ಸಿನಿಮಾಕ್ಕೆ ಸಾಹಿತ್ಯ ರಚನೆಯಾಗಿದೆ. ಒಂದು ನಿರ್ದಿಷ್ಟ ಸಾಹಿತ್ಯ ಕೃತಿಯನ್ನು ಆಧರಿಸದಿದ್ದರೂ ಒಟ್ಟಾರೆ ಲಿಖಿತ ಅಥವಾ ಮೌಖಿಕ

ಸಾಹಿತ್ಯದಿಂದಲೇ ಕನ್ನಡ ಸಿನಿಮಾ ತನ್ನ ಪ್ರಾರಂಭಿಕ ಪ್ರೇರಣೆಗಳನ್ನು ಪಡೆದಿದೆ."[6] ಎಂಬುದು ಬರಗೂರು ರಾಮಚಂದ್ರಪ್ಪರವರ ಅಭಿಪ್ರಾಯವಾಗಿದೆ. ಆರಂಭಿಕ ಸಿನಿಮಾ ಯಾತ್ರೆಯು ಸಹ ಒಂದಲ್ಲ ಒಂದು ರೀತಿಯಲ್ಲಿ ಸಾಹಿತ್ಯವನ್ನು ಅವಲಂಬಿಸಿತ್ತು. ಯಾವ ಪ್ರಕಾರದಿಂದಲು ಸಿನಿಮಾವು ಸಾಹಿತ್ಯವನ್ನು ಹೊರತುಪಡಿಸಿ ಮುನ್ನಡೆಯಲು ಸಾಧ್ಯವಿಲ್ಲ ಎಂಬುದು ಇದರಿಂದ ಅರ್ಥವಾಗುತ್ತದೆ. ಒಟ್ಟಾರೆ ಯಾವುದೇ ದೃಶ್ಯರೂಪದಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಸಿನಿಮಾಕ್ಕೆ ಅದರ ಮಿತಿಯೊಳಗೆ ಸಿನಿಮಾದ ಜೊತೆ ಸಂಬಂಧ ಏರ್ಪಡಿಸಿಕೊಂಡಿರುವುದು ಸಹಜವೆನಿಸುತ್ತದೆ. ಅದರಲ್ಲು ಕನ್ನಡ ಸಿನಿಮಾ ಪರಂಪರೆಯಲ್ಲಿ ಸಿನಿಮಾ ಮತ್ತು ಸಾಹಿತ್ಯ ಜೊತೆ ಜೊತೆಗೆ ಮುಂದುವರಿದುಕೊಂಡು ಬಂದಿದೆ. ಸಾಹಿತ್ಯ ಎಂಬುದು ಕೇವಲ ಲಿಖಿತ ರೂಪವಾಗಿರದೆ ವೈವಿಧ್ಯಮಯ ಅರ್ಥ ಸಾಧ್ಯತೆಗಳನ್ನು ಸೃಷ್ಟಿಸುವ ಕಲಾಪ್ರಕಾರವಾಗಿದೆ. ವ್ಯವಸ್ಥಿತವಾದ ಸೃಜನಶೀಲ ಸಾಹಿತ್ಯ ಸೃಷ್ಟಿ ಬೇರೆಯದೇ ಹೊಸ ಸಾಧ್ಯತೆಗಳನ್ನು ತೋರಿಸುವ ಪ್ರಕ್ರಿಯೆಯಾಗಿದೆ. ಸಿನಿಮಾಕ್ಕೆಂದು ಕಥಾಹಂದರವನ್ನು ವಿಶ್ಲೇಷಿಸಲು ತೊಡಗುವ ಈ ಹೇಳಿಕೆ ಖಂಡಿತ ವಿಭಿನ್ನ ಸಾಧ್ಯತೆಗಳನ್ನು ತೋರುತ್ತದೆ. ಮೂಕಿ ಚಿತ್ರದ ಕಾಲಘಟ್ಟದಲ್ಲೂ ಸಹ ಚಲನಚಿತ್ರಕ್ಕೆ 'ಕತೆ' ಎಂಬುದು ಇತ್ತು. ಆದರೆ ಅದನ್ನು ವಿಶ್ಲೇಷಿಸುವ ಕ್ರಮ ಬೇರೆಯದ್ದೆ ಆಗಿತ್ತು. ಹಾಗಾಗಿ ಕತೆ ಎಂಬುದು ಸಾಹಿತ್ಯಕ್ಕಿರಬಹುದು, ಸಿನಿಮಾಕ್ಕಿರಬಹುದು ಜೀವಾಳವಾಗಿರುತ್ತದೆ. ಅದರ ಜೊತೆ ಜೊತೆಗೆ ಕಾರ್ಯ ನಿರ್ವಹಿಸುವ ಕ್ರಮ ಬೇರೆಯದ್ದು. ಕತೆ ಮತ್ತು ಸಿನಿಮಾ ಜೊತೆ ಜೊತೆಯಾಗಿ ಒಂದಾಗಿ ನಿರ್ವಹಿಸುವ ವಿಭಿನ್ನ ನೆಲೆಗಟ್ಟಿನಲ್ಲಿ ಎರಡರ ಸಂಬಂಧವು ಮುನ್ನೆಡೆಯುತ್ತಿರುತ್ತದೆ. ಪ್ರತಿ ಚಲನಚಿತ್ರ ಸಾಹಿತ್ಯದ ಜೊತೆ ಅವಿನಾಭಾವ ರೀತಿಯ ಸಂಬಂಧವನ್ನು ಒಳಗೊಂಡಿದ್ದು ಯಾವುದೇ ರೀತಿಯಲ್ಲು ಒಂದನನ್ನು ಬಿಟ್ಟು ಇನ್ನೊಂದು ಇಲ್ಲದ ಸ್ಥಿತಿಯನ್ನು ಕಾಣುತ್ತೇವೆ. ಕನ್ನಡ ಸಾಹಿತ್ಯವು ವಿಭಿನ್ನ ಬಗೆಯ ನೆಲೆಗಳಲ್ಲಿ ತನ್ನ ಛಾಪನ್ನು ಮೂಡಿಸುವುದರ ಜೊತೆಗೆ ಚಲನಚಿತ್ರದ ಭಾಗವಾಗಿ ಕಾರ್ಯ ನಿರ್ವಹಿಸುತ್ತಿರುವ ಸಾಧ್ಯತೆ ಇದೆ. ಕೇವಲ ಲಿಖಿತ ರೂಪದ ಸಾಹಿತ್ಯವನ್ನು ಬಳಸಿದರೆ ಮಾತ್ರ ಸಾಹಿತ್ಯ ಆಧಾರಿತ ಚಿತ್ರ ಎಂಬ ವಿಂಗಡಣೆಯನ್ನು ಈ ಹೇಳಿಕೆ ತಳ್ಳಿಹಾಕುತ್ತದೆ. ಅಲಿಖಿತ ಸಾಹಿತ್ಯವು ಸಿನಿಮಾಕ್ಕೆ ಪ್ರೇರಣೆಯಾದ ಉದಾಹರಣೆಗಳನ್ನು ಇದು ವಿವಿಧ ಶೈಲಿಗಳಲ್ಲಿ ಗುರ್ತಿಸಲು ಯತ್ನಿಸುತ್ತದೆ. ಜನಪದ ಪ್ರಕಾರಗಳಿಂದಲೂ ಸ್ಫೂರ್ತಿ ಪಡೆದು ಚಿತ್ರಗಳಾಗಿರುವ ಕ್ರಮವನ್ನು ಗಮನಿಸಿದರೆ ಜನಪದ ಪ್ರೇರಣೆಯು ಸಾಹಿತ್ಯದ ರೂಪವಾಗಿರುತ್ತದೆ ಎಂಬ ಪರಿಭಾಷೆಯನ್ನು ಹೇಳುವ ಕ್ರಮದಲ್ಲಿ ತೋರುತ್ತದೆ. ಪುರಾಣಗಳನ್ನು ಆಧರಿಸಿ ಸಿನಿಮಾ ಸೃಷ್ಟಿಮಾಡಿದರೂ ಕೂಡ ಅದು ಸಾಹಿತ್ಯಾಧಾರಿತ ಚಿತ್ರವೇ ಆಗಿರುತ್ತದೆ ಎಂಬ ಮಾತನ್ನು ಅದು ವಿವರಿಸುವ ಪ್ರಯತ್ನ ಮಾಡುತ್ತದೆ. ಹಾಗಾಗಿ ಯಾವುದೇ ರೀತಿಯ ಸಾಹಿತ್ಯ ಪ್ರಕಾರಗಳನ್ನು ಹೊರತುಪಡಿಸಿ ಸಿನಿಮಾ ತಯಾರಿಕೆ ಇಲ್ಲದಿರುವ ಮಾತನ್ನು ಈ ಅಂಶ ಗುರ್ತಿಸುತ್ತದೆ.

"ಭಾರತೀಯ ಚಿತ್ರರಂಗದ ತಳಹದಿಯೇ ಕಥೆ. ಕಥೆ ಹೇಳುವ ಕೇಳುವ ಕಲೆ ಜನಪದ ಮೂಲದಿಂದ ಬಂದಿದೇ ಆಗಿರುವುದರಿಂದ, ಅಂತಹ ಒಂದು ಪರಂಪರೆ ಈ ನೆಲದ ಗುಣವೇ ಆಗಿ, ಸಿನಿಮಾ ಮೂಲಕವೂ ಪ್ರವಹಿಸುತ್ತಿದೆ. ಮೂಕಿ ಚಿತ್ರಗಳಲ್ಲಿ ಸಂಭಾಷಣೆ ಇಲ್ಲದಿದ್ದರು ಇವು ಜನರನ್ನು ತಲುಪವಲ್ಲಿ ಯಶಸ್ವಿಯಾದವು. ಮೂಕಿಚಿತ್ರ ಕೂಡ ಚಿತ್ರಕತೆಯ ಮೂಲಕವೇ ತೆರೆಯ ಮೇಲೆ ತೆರೆದುಕೊಳ್ಳುತ್ತದಲ್ಲದೆ, ಕಾದಂಬರಿ ಆಧಾರಿತವೂ ಆಗಿರುತ್ತಿದ್ದವು. ಸಿನಿಮಾ ಆರಂಭ ದಿನಗಳಂದಲೇ ಬೆಳೆಸಿಕೊಂಡು ಬಂದ ಸೃಜನಾತ್ಮಕ ನೆಲೆಯನ್ನು ಹೇಳುತ್ತದೆ. ಭಾರತೀಯ ಚಿತ್ರರಂಗದ ಮತ್ತೊಂದು ವೈಶಿಷ್ಟವೆಂದರೆ, ಜನತೆಯ ಆಶೋತ್ತರಗಳಿಗೆ ಸ್ಪಂದಿಸಿದ್ದು, ಕಾಲಮಾನದ ಸಾಮಾಜಿಕ ಸ್ಥಿತಿಗತಿಗಳನ್ನು ಚಿತ್ರಿಸುವ, ಪ್ರಶ್ನಿಸುವ, ಮೂಲಕ ಕುದಿಯುತ್ತಿದ್ದ ಮೌನ ದನಿಗಳಿಗೆ ಚಿತ್ರರಂಗ ವೇದಿಕೆ ಕಲ್ಪಿಸಿದ್ದರಿಂದಲೇ ಜನಮನಗಳನ್ನು ಬೆಸೆಯುವ ಮಾಧ್ಯಮವಾಗಿ ಸಿನಿಮಾ ಬೆಳೆಯಲು ಆರಂಭಿಸಿತು. ಸಾಂಸ್ಕೃತಿಕ ಪುನರುಜ್ಜೀವನವಾಗಿ ಬೆಳೆದ ಸಿನಿಮಾ ಬೆಳವಣಿಗೆಯೊಂದಿಗೇ ಹೆಜ್ಜೆ ಹಾಕುತ್ತಾ, ಬೆಳೆದ ರಾಷ್ಟ್ರೀಯ ಸ್ವಾತಂತ್ರ್ಯವು ಕೂಡ ಜನಮುಖಿಯಾಗಿ, ಸಮಾಜ ಸುಧಾರಣೆಗೆ ಪೂರಕವಾಗಿ ವೈಚಾರಿಕ ಮಗ್ಗಲುಗಳನ್ನು ಬಿಂಬಿಸುತ್ತಾ ಬಂದವು. ಪ್ರತಿಚಿತ್ರರಂಗಕ್ಕೂ ತನ್ನದೇ ಬದ್ಧತೆ ಇರುವುದನ್ನು ನಾವು ಕಾಣುತ್ತೇವೆ. ಪ್ರತಿ ಚಿತ್ರದಲ್ಲೂ ಸಮಾಜಕ್ಕೆ ಒಂದು ನಿರ್ದಿಷ್ಟ ಸಂದೇಶವನ್ನು ನೀಡುತ್ತಿದ್ದವು. ಅದು ಯಾವುದೇ ಪ್ರಕಾರದ ಸಿನಿಮಾ ಆಗಿದ್ದರು ಮೌಲ್ಯವಿದ್ದಿತು."[7] ಇದು ಗಂಗಾಧರ್ ಮೊದಲಿಯಾರ್ ರವರ ಅಭಿಪ್ರಾಯವಾಗಿದೆ. ಸಾಹಿತ್ಯದ ಜೊತೆಗೆ ಸಿನಿಮಾದ ಕಥನದ ಸಾಧ್ಯತೆಗಳನ್ನು ಗುರ್ತಿಸಿದ್ದಾರೆ. ಕಥನ ಕ್ರಮ ಎನ್ನುವುದು ಸಾಹಿತ್ಯದ ಮೂಲವಾಗಿ ತನ್ನ ವಿಶಿಷ್ಟ ಅರ್ಥಸಾಧ್ಯತೆಯನ್ನು ವಿವರಿಸುತ್ತದೆ.

## 2.2 ಕನ್ನಡ ಸಾಹಿತ್ಯ ಕೃತಿಗಳನ್ನು ಆಧಾರಿತ ಚಲನಚಿತ್ರಗಳ ಸಂಕ್ಷಿಪ್ತ ಪರಿಚಯ

ಇಡೀ ಕನ್ನಡ ಸಾಹಿತ್ಯ ಮತ್ತು ಕನ್ನಡ ಚಲನಚಿತ್ರ ಇತಿಹಾಸವನ್ನು ನೋಡಿದರೇ ಇವೆರಡರ ನಡುವೆ ಇರುವಂತಹ ಅಭೂತಪೂರ್ವ ಸಂಬಂಧ ನಮಗೆ ತೋರುತ್ತದೆ. ಆರಂಭಕಾಲದ ಕ್ನನಡ ಸಿನಿಮಾ ಇತಿಹಾಸದಲ್ಲಿ ಪುರಾಣ, ಐತಿಹಾಸಿಕ, ಭಕ್ತಿಪ್ರಧಾನತೆಗೆ ಅಂಟಿಕೊಂಡಿದ್ದ ಸಿನಿಮಾ ಮುಂದೆ ಸಾಮಾಜಿಕ ಚಿತ್ರಗಳಾಗಿ ಮಾರ್ಪಾಡಾದ ಕಾಲಕ್ಕೆ ಹೆಚ್ಚು ಒತ್ತು ಕೊಟ್ಟಿದ್ದು ಕಾದಂಬರಿ ಪ್ರಕಾರಕ್ಕೆ. ಆ ನಿಟ್ಟಿನಲ್ಲಿ 'ಕರುಣೆಯೇ ಕುಟುಂಬದ ಕಣ್ಣು' ಮೊದಲ ಕಾದಂಬರಿಯಾಧಾರಿತ ಸಿನಿಮಾವಾಗಿ ನಿರೂಪಿತವಾಗಿದೆ. ಅದರ ನಂತರ ಹಲವು ಸಾಹಿತ್ಯ ಪ್ರಕಾರಗಳಾದ ಕತೆ, ಕಾದಂಬರಿ, ನಾಟಕಗಳಿಗೆ ಹೆಚ್ಚಿನ ಮೌಲ್ಯ ಸಿಕ್ಕಿದ್ದನ್ನು ನಾವು ಕಾಣಬಹುದು. ಅದರೊಟ್ಟಿಗೆ ಕನ್ನಡ ಸಾಹಿತ್ಯ ಮತ್ತು ಕನ್ನಡ ಸಿನಿಮಾದ ಯಶಸ್ಸು ಹೆಚ್ಚಿದ್ದು ಇಂದು ಇತಿಹಾಸ.

ಸಾಮಾಜಿಕ ಸಿನಿಮಾ ಕ್ಷೇತ್ರದಲ್ಲಿ ಹೆಚ್ಚು ಪ್ರಭಾವಶಾಲಿ ಯಶಸ್ಸನ್ನು ಪಡೆದಿದ್ದು ಈ ಕಾಲಘಟ್ಟದಲ್ಲೆ. ಹೊಸ ಹೊಸ ಆವಿಷ್ಕಾರಗಳಿಗೆ ಒಳಗಾದ ಸಿನಿಮಾ ಕ್ಷೇತ್ರ ಮೂಕಿಯಿಂದ ಮಾತಿಗೆ, ಕಪ್ಪು-ಬಿಳುಪಿನಿಂದ ಬಣ್ಣಕ್ಕೆ ಬದಲಾದ ಸಂದರ್ಭ ಇಡೀ ಪ್ರೇಕ್ಷಕವರ್ಗವನ್ನು ತನ್ನತ್ತ ಸೆಳೆದ ರೀತಿ ಅವಿಸ್ಮರಣೀಯ. ಯಾವುದೋ ಒಂದು ಸಿದ್ಧ ಮನರಂಜನೆಯ ಸ್ಥಿತಿಗೆ ಇದ್ದ ಪ್ರೇಕ್ಷಕ ಈ ರೀತಿಯ ಆಧುನಿಕ ಬದಲಾವಣೆಯಿಂದ ಹೆಚ್ಚು ಆಕರ್ಷಿತನಾದ ಈ ರೀತಿಯ ಹೊಸ ಆಕರ್ಷಣೆಗೆ ಕಾರಣವಾಗಿದ್ದು ಸಿನಿಮಾ ಕ್ಷೇತ್ರದಲ್ಲಿದ್ದ ಬದಲಾವಣೆಯೇ ಬಹುಮುಖ್ಯ ಅಂಶ. ವಿವಿಧ ವರ್ಗದ ಪ್ರೇಕ್ಷಕನನ್ನು ತೃಪ್ತಿ ಪಡಿಸಬೇಕಾದ ತುರ್ತು ಸಿನಿಮಾ ಕ್ಷೇತ್ರಕ್ಕೆ ಇತ್ತು. ಆ ಕಾರಣಕ್ಕೆ ಹೊಸ ತಾಂತ್ರಿಕ ವಿಚಾರಗಳಿಗೆ ಒಳಪಡುವ ಕ್ರಮಕ್ಕೆ ತೊಡಗಿತು.

ಕನ್ನಡ ಸಾಹಿತ್ಯಕ್ಕೆ ಇದ್ದಂತಹ ವಾಚಕವರ್ಗ ಬರಿ ಅಕ್ಷರ ಸಮುದಾಯವು ಮುಂದೆ ಈ ಸಾಹಿತ್ಯ ಸಿನಿಮಾದ ದೃಶ್ಯ ಮಾಧ್ಯಮಕ್ಕೆ ಒಳಪಟ್ಟ ಸಂದರ್ಭದಲ್ಲಿ ಪ್ರೇಕ್ಷಕ ಸಮುದಾಯ ಬೆಳೆಯಿತು ಎಂದಲ್ಲಿ ತಪ್ಪಾಗುವುದಿಲ್ಲ. ಕೇವಲ ಅಕ್ಷರ ರೂಪದಲ್ಲಿದ್ದ ಕೃತಿಗಳು ಸಿನಿಮಾ, ನಾಟಕಗಳಂತಹ ಸಮೂಹ ಮಾಧ್ಯಮಕ್ಕೆ ಒಡ್ಡಿಕೊಂಡಾಗ ಅದನ್ನು ವೀಕ್ಷಿಸುವ ವರ್ಗ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶ ಪಟ್ಟಂತಾಯಿಯತಲ್ಲವೆ. ಅಕ್ಷರ ಬಲ್ಲದವನಿಗೂ ಸಾಹಿತ್ಯದ ಪರಿಚಯ ಮಾಡಿಸಿಕೊಟ್ಟಂತಹ ಹೆಗ್ಗಳಿಕೆ ಸಿನಿಮಾ ಎಂಬ ಮಾಧ್ಯಮಕ್ಕೆ ಸಲ್ಲುತ್ತದೆ. ಆದ್ದರಿಂದ ಯಾವುದೇ ಕಾಲದಲ್ಲೂ ಸಿನಿಮಾ ಮತ್ತು ಸಾಹಿತ್ಯ ತುಂಬಾ ಗಟ್ಟಿಯಾದ ಸಂಬಂಧವನ್ನು ಹೊಂದಿರುವುದರಲ್ಲಿ ಎರಡು ಮಾತಿಲ್ಲ. "ಪ್ಯಾರಿಸ್‌ನಲ್ಲಿ 1895 ರಲ್ಲಿ ಚಲನಚಿತ್ರ ಉಗಮವಾಯಿತು. ಮರು ವರ್ಷವೆ ಭಾರತಕ್ಕೆ ಸಿನಿಮಾ ಧುಮುಕಿತು. ಕನ್ನಡ ಸಿನಿಮಾ ತಯಾರಾಗಲು 26 ವರ್ಷ ಹಿಡಿದಿದ್ದು ಹಿಂದಿನ ಇತಿಹಾಸ".[8] ಯಾಕೆಂದರೆ ಯಾವುದೇ ಒಂದು ಹೊಸ ಸಾಧ್ಯತೆಗಳಿಗೆ ತೆರೆದುಕೊಳ್ಳುವುದು ಒಂದು ಕಾಲಕ್ಕೆ ಅಷ್ಟು ಸುಲಭವಾಗಿರಲಿಲ್ಲ. ಆಗ ನಾಟಕವೆ ಕರ್ನಾಟಕ ಮನರಂಜನೆಯ

ಮಾಧ್ಯಮವಾಗಿತ್ತು. ಕಾಲಾಂತರದಲ್ಲಿ ಉಂಟಾದ ಬದಲಾವಣೆಗೆ ಕನ್ನಡ ಸಿನಿಮಾ ಕ್ಷೇತ್ರವು ತನ್ನನ್ನು ತಾನು ತೆರೆದುಕೊಂಡಿದ್ದು ಸಹ ಸ್ವಲ್ಪ ತಡವಾಗಿಯೆ. "1896 ರಿಂದ 1912 ರ ಕಾಲಘಟ್ಟ ಚಲನಚಿತ್ರ ಇತಿಹಾಸದಲ್ಲಿ ಉದಯಕಾಲವಾಗಿತ್ತು. ಈ ಕಾಲದಲ್ಲಿ ಭಾರತದಲ್ಲಿ ಸಾಕ್ಷ್ಯ ಚಿತ್ರ ಕಿರುಚಿತ್ರಗಳಂತಹ ಪ್ರಯೋಗವನ್ನಷ್ಟೆ ಮಾಡುತ್ತಿತ್ತು. 1912 ರಿಂದ 1934 ವರೆಗಿನ ಕಾಲ ಮೂಕಿ ಚಿತ್ರಗಳ ಕಾಲವೆಂದು ನಾವು ವಿಂಗಡಿಸಿಕೊಳ್ಳಬಹುದು."[9] ಈ ಮೂಕಿ ಚಿತ್ರಗಳ ಪರಂಪರೆಯಲ್ಲಿ ಭಾರತದಾದ್ಯಂತ 1279 ಮೂಕಿ ಚಿತ್ರಗಳು ತಯಾರಾಗಿದ್ದವು. ಅದರಲ್ಲಿ ಕರ್ನಾಟಕದ ಪಾಲು 175 ಎಂಬುದು ಗಮನಾರ್ಹ ಸಂಗತಿಯಾಗಿದೆ. ಕರ್ನಾಟಕದಲ್ಲಿ ಮೂಕಿ ಚಿತ್ರ ಪ್ರಾರಂಭವಾದುದಕ್ಕೆ ಹಲವಾರು ವಾದ-ವಿವಾದಗಳಿವೆ. "1929 ರಲ್ಲಿ ಬೆಂಗಳೂರಿನಲ್ಲಿ ತಯಾರಾದ 'ವಸಂತಸೇನೆ' ಮೊದಲ ಕನ್ನಡ ಮೂಕಿ ಚಿತ್ರ ಎಂಬ ವಾದವಿದ್ದರು. 1921 ರಲ್ಲಿ ರತ್ನಾವಳಿ ಥಿಯೇಟ್ರಿಕಲ್ ಕಂಪನಿಯವರು 'ನಿರೂಪಮಾ' ಎಂಬ ನಾಟಕವನ್ನು ಚಿತ್ರವಾಗಿಸಿದ್ದರು ಎಂಬ ಮಾತು ಇದೆ. ಹಾಗೆಯೇ 1925 ರಲ್ಲಿ ಗುಬ್ಬಿ ವೀರಣ್ಣನವರ 'ಮಹಾತ್ಮ ಕಬೀರ್' ನಾಟಕವನ್ನೆ ಸಿನಿಮಾ ಮಾಡಿದ್ದರು ಎಂಬ ವಾದವಿದೆ. ಅದು ಏನೇ ಆದರೂ ಮೂಕಿ ಸಿನಿಮಾ ಕ್ಷೇತ್ರದ ಬೆಳವಣಿಗೆಯಲ್ಲಿ 'ವಸಂತಸೇನೆ' ಒಂದು ವಿಶಿಷ್ಟ ಪ್ರಯೋಗವಾಗಿ ದಾಖಲಾಗಿದ್ದು ಇತಿಹಾಸವಾಗಿದೆ".[10] ಇಂತಹ ಮೂಕಿಚಿತ್ರಗಳ ಸಂದರ್ಭದಲ್ಲಿಯೇ ಶಿವರಾಮ ಕಾರಂತರು 1930-31 ರಲ್ಲಿ 'ಭೂತರಾಜ್ಯ' 'ಡೊಮಿಂಗೊ'ಎಂಬ ಎರಡು ಮೂಕಿ ಚಿತ್ರಗಳನ್ನು ನಿರ್ಮಾಣ ಮಾಡಿದ್ದರು. ಕನ್ನಡ ಸಾಹಿತ್ಯದ ದಿಗ್ಗಜನಾಗಿ ಮಾಡಿದ ಅಪೂರ್ವ ಸೇವೆ ಇದು ಎನ್ನುವುದು ವಿಶೇಷವಾಗಿದೆ. 1931 ರ ಕಾಲಕ್ಕೆ 'ಆಲಾಂ ಆರಾ' ಚಿತ್ರ ತೆರೆ ಕಾಣುವುದರೊಂದಿಗೆ ಮೂಕಿ ಚಿತ್ರದ ಕಾಲ ಕೊನೆಗೊಂಡಿತು. "ಕನ್ನಡದಲ್ಲಿ 1934 ರಲ್ಲಿ ಪ್ರಥಮ ವಾಕ್ಚಿತ್ರವಾಗಿ 'ಸತಿ ಸುಲೋಚನ' ತೆರೆಗೆ ಬಂದು ಮೂಕಿ ಚಿತ್ರದ ಇತಿಹಾಸವನ್ನು ಕೊನೆಗಾಣಿಸಿತು. ಇದಕ್ಕೂ ಮೊದಲು 1933 ರಲ್ಲಿ ತಯಾರಿಕೆ ಆರಂಭಿಸಿದ ಭಕ್ತ ಧ್ರುವ ಚಿತ್ರ ಚಿತ್ರ ಸೆನ್ಸಾರ್ ಆಗಿ 1934 ರಲ್ಲಿ ಏಪ್ರಿಲ್ ಒಂದರಂದು ಬಿಡುಗಡೆಯಾದರೆ, ಸತಿಸುಲೋಚನ 1934 ರ ಮಾರ್ಚ್ 3 ರಂದು ತೆರೆಕಂಡು ಪ್ರಥಮ ವಾಕ್ಚಿತ್ರ ಎಂಬ ದಾಖಲೆಯಲ್ಲಿ ಸೇರಿಕೊಂಡಿತು. ಸತಿ ಸುಲೋಚನದಂತಹ ಸಿನಿಮಾ ಬಿಡುಗಡೆಯೊಂದಿಗೆ ಕನ್ನಡ ಚಿತ್ರರಂಗಕ್ಕೊಂದು ಅಸ್ತಿತ್ವ ಬಂದಿತು."[11] ಮನರಂಜನೆಯ ಮಾಧ್ಯಮ ಕ್ಷೇತ್ರದಲ್ಲಿ ಕನ್ನಡನಾಡು ಮತ್ತು ಕನ್ನಡಿಗರು ಇತರ ಭಾಷಾ ಚಿತ್ರೋದ್ಯಮದ ಸಾಲಿಗೆ ಸೇರ್ಪಡೆಗೊಂಡಿದ್ದು ವಿಶಿಷ್ಟ ಅಂಶವಾಗಿದೆ.

ಹೊಸಯುಗದ ಆರಂಭದೊಂದಿಗೆ ಚಲನಚಿತ್ರ ಇತಿಹಾಸ ಮತ್ತಷ್ಟು ಪ್ರಭಾವಶಾಲಿಯಾಗಿ ಬೆಳೆದಿದ್ದು ಅವಿಸ್ಮರಣೀಯ. ಈ ಶಕೆಯೊಂದಿಗೆ ಕನ್ನಡ ಸಿನಿಮಾ ಮತ್ತು ಕನ್ನಡ ಸಾಹಿತ್ಯಕ್ಕೆ ತನ್ನದೇ ಆದಂತಹ ಅಂತರ್ ಸಂಬಂಧ ಬೆಳೆಯಿತು. ಆ ಕಾಲಘಟ್ಟದಲ್ಲಿ ಪುರಾಣ, ಐತಿಹಾಸಿಕ, ನಾಟಕ ಆಧಾರಿತ, ಭಕ್ತಿ ಪ್ರಧಾನ ಎಂಬ ಕ್ರಮದಲ್ಲಿಯೇ ಜರುಗುತ್ತಿತ್ತು. ಸಾಮಾಜಿಕ ಚಿತ್ರವಾಗಿ 1936 ರಲ್ಲಿ 'ಸಂಸಾರ ನೌಕೆ' ಎಂಬ

ಎಚ್.ಎಲ್.ಎನ್ ಸಿಂಹ ನಿರ್ದೇಶನದೊಂದಿಗೆ ದಕ್ಷಿಣ ಭಾರತ ಸಿನಿಮಾ ಇತಿಹಾಸದಲ್ಲಿ ಮತ್ತೊಂದು ಮೈಲಿಗಲ್ಲು ಸ್ಥಾಪನೆಯಾದದ್ದು ಉತ್ತಮ ಬೆಳವಣಿಗೆಯಾಗಿದೆ. ಇದರೊಟ್ಟಿಗೆ 1937 ರಲ್ಲಿ ತೆರೆಕಂಡ 'ರಾಜಸೂಯಾ ಯಾಗ' ಸಂಪೂರ್ಣವಾಗಿ ಕನ್ನಡದಲ್ಲಿ ತಯಾರಾದ ಮೊದಲ ಚಿತ್ರವಾಗಿ ಹೆಸರು ಪಡೆಯಿತು.

ಕನ್ನಡ ಸಾಹಿತ್ಯ ಕೃತಿಗಳು ಚಲನಚಿತ್ರಗಳಾಗಿ ಪರಿವರ್ತನೆಗೊಳ್ಳಲು ಸ್ವಲ್ಪ ಸಮಯ ತೆಗೆದುಕೊಂಡಿದ್ದು ಕೂಡ ಗಮನಾರ್ಹ ವಿಚಾರ. 1962 ರಲ್ಲಿ ಕೃಷ್ಣಮೂರ್ತಿ ಪುರಾಣಿಕ್‌ರವರ 'ಧರ್ಮದೇವತೆ' ಕಾದಂಬರಿಯ ಆಧಾರಿತ ಚಿತ್ರ 'ಕರುಣೆಯೇ ಕುಟುಂಬದ ಕಣ್ಣು' ಮೊದಲ ಕಾದಂಬರಿಯಾಧಾರಿತ ಚಿತ್ರವಾಗಿ ರೂಪುಗೊಂಡಿತು. ಈ ಚಿತ್ರದೊಂದಿಗೆ ಹಲವಾರು ವರ್ಷಗಳ ಕಾಲ ಕನ್ನಡ ಸಾಹಿತ್ಯದಲ್ಲಿನ ಕೃತಿಗಳನ್ನು ಚಿತ್ರಗಳಾಗಿ ನಿರ್ಮಾಣ ಮಾಡಿ ಹೆಚ್ಚಿನ ಯಶಸ್ಸನ್ನು ಪಡೆದಿರುವುದು ಇತಿಹಾಸವಾಗಿದೆ. 1960 ರಲ್ಲಿ ದಾದಾ ಮಿರಾಸಿಯವರ ಕತೆ ಆಧಾರಿತ 'ಮಕ್ಕಳ ರಾಜ್ಯ' ಎಂಬ ಸಿನಿಮಾ ಕೂಡ ತಯಾರಾಗುವುದರೊಂದಿಗೆ 1960 ರ ದಶಕದ ನಂತರ ಕನ್ನಡ ಸಾಹಿತ್ಯದೊಂದಿಗೆ ಸಿನಿಮಾ ಬೆಸೆದುಕೊಂಡ ನಂಟು ವಿಶಿಷ್ಟವಾಗಿರುವುದು. ಈ ನೆಲೆಗಟ್ಟಿನಲ್ಲಿಯೇ ಹಲವಾರು ಕತೆ, ಕಾದಂಬರಿ, ನಾಟಕ, ಕಾವ್ಯ ಹೀಗೆ ಎಲ್ಲಾ ಪ್ರಕಾರದ ಸಾಹಿತ್ಯ ಕೃತಿಗಳು ಚಲನಚಿತ್ರಗಳಾಗಿ ನಿರ್ಮಾಣಗೊಂಡು ಸಾಹಿತ್ಯದೊಂದಿಗೆ ಸಿನಿಮಾದ ಸಂಬಂಧ ಬೆಳೆದಿದ್ದು ಕೂಡ ಈ ಕ್ರಮದಲ್ಲಿಯೆ ಆಗಿದೆ. ಇದರೊಟ್ಟಿಗೆ ಕನ್ನಡ ಸಾಹಿತಿಗಳು ಕೂಡ ಸಿನಿಮಾ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದರು. ಇದರಿಂದಾಗಿ ನಮಗೆ ಕನ್ನಡ ಸಾಹಿತ್ಯ ಮತ್ತು ಸಿನಿಮಾದ ಸಂಬಂಧ ಎಂತಹುದು ಎಂದು ತಿಳಿಯುತ್ತದೆ.

ಕನ್ನಡ ಸಿನಿಮಾ ಎಂದರೆ ಎಲ್ಲಾ ಪ್ರೇಕ್ಷಕ ವರ್ಗ ತುಂಬಾ ಗೌರವಭಾವದಿಂದ ನೋಡುತ್ತಿದ್ದ ಕಾಲ ಬದಲಾಗಿ ಕನ್ನಡ ಸಿನಿಮಾ ಕ್ಷೇತ್ರವನ್ನು ಇಂದು ಹಿಯಾಳಿಸುವ ಸ್ಥಿತಿಗೆ ಬಂದುನಿಂತಿದೆ. ಕಾರಣವನ್ನು ಹುಡುಕಿದರೆ ಸಿನಿಮಾಕ್ಕೆ ಬೇಕಾದ ಒಂದು ಮೌಲ್ಯಯುತ ಕತೆ ಇಲ್ಲದಿರುವುದನ್ನು ಕಾಣುತ್ತೇವೆ. ಯಾಕೆ ಹೀಗಾಯಿತು ಎಂದು ಆಲೋಚಿಸಿದರೆ ಜನ ಬೆರಳು ಮಾಡಿ ತೋರಿಸುವುದು ಸಿನಿಮಾದ ಕಡೆ ಇಲ್ಲಿ ಕಾಲಘಟ್ಟದ ಬದಲಾವಣೆಯಲ್ಲಿ ಯಾವ ರೀತಿ ಸಿನಿಮಾ ಕ್ಷೇತ್ರ ಬದಲಾಗಿದೆ ಎಂಬುದು ಮುಖ್ಯವಾಗುತ್ತದೆ. ಇಂದು ಸಿನಿಮಾ ಎಂದರೆ ಒಂದಷ್ಟು ದೃಶ್ಯಗಳು, ಹಾಡು, ಹೊಡೆದಾಟ, ಐಟಂ ಸಾಂಗ್, ಕ್ಲೈಮ್ಯಾಕ್ಸ್, ಸ್ಟಾರ್ ನಟನ ಅಭಿನಯವೇ ಸಿನಿಮಾ ಆಗಿದೆ. ಇಲ್ಲಿ ಮುಖ್ಯವಾಗಿ ಸಿನಿಮಾಗೆ ಬೇಕಾದ 'ಗಟ್ಟಿಕತೆ' ಎಂಬುದನ್ನು ಮರೆತಿರುವಂತೆ ಕಾಣುತ್ತಿದೆ. ಯಾರಿಗೂ ಅದರ ಅರಿವೇ ಇಲ್ಲದೆ ಸಿನಿಮಾ ಎಂದರೆ ಒಂದಷ್ಟು ಸಿದ್ಧ ಸರಕಿನ(ರೆಡಿಮೆಡ್) ಹಾಗೆ ಕಾಣುತ್ತಿದ್ದಾರೆ. ಸಮಾಜದ ಓರೆ ಕೋರೆಗಳನ್ನು ತಿದ್ದಬೇಕಾದ ಸಮೂಹ ಮಾಧ್ಯಮಗಳಲ್ಲಿ ಅತ್ಯಂತ ಪ್ರಭಾವಶಾಲಿಯಾದ ಸಿನಿಮಾ ಮಾಧ್ಯಮ ತನ್ನ ಬಹುಮುಖ್ಯ

ಜವಾಬ್ದಾರಿಯನ್ನು ಮರೆತಂತೆ ಕಾಣುತ್ತಿದೆ. ಅದೇ ಹಳೆಯ ಪ್ರೇಮ, ಕಾಮ, ಹಿಂಸೆಯ ಸಿನಿಮಾದ ಭಾಗಗಳಾಗಿ ಮುಂದುವರೆಯುತ್ತಿದೆ.

ಕನ್ನಡ ಸಾಹಿತ್ಯದೊಂದಿಗೆ ಸಿನಿಮಾ ಬೆಸೆದುಕೊಂಡ ಸಂಬಂಧವು ಅತ್ಯಂತ ವಿಶಿಷ್ಟವಾದಂತಹುದು. ಕನ್ನಡ ಸಾಹಿತ್ಯಕ್ಷೇತ್ರದ ದಿಗ್ಗಜರೆನಿಸಿಕೊಂಡವರೆಲ್ಲ ಸಿನಿಮಾ ಕ್ಷೇತ್ರದ ತೊಡಗಿಸಿಕೊಂಡಿದ್ದು ಈ ಎರಡು ಕ್ಷೇತ್ರಗಳ ಬೆಳವಣಿಗೆ ಅಡಿಪಾಯವಾಗಿರುವಂತಹದ್ದು. ಅ.ನ.ಕೃಷ್ಣರಾಯ, ಟಿ.ಪಿ.ಕೈಲಾಸಂ, ಬಿ.ಪುಟ್ಟಸ್ವಾಮಯ್ಯ, ಚದುರಂಗ, ಶಿವರಾಮ ಕಾರಂತ, ದ.ರಾ.ಬೇಂದ್ರೆ, ಲಂಕೇಶ್, ಶ್ರೀಕೃಷ್ಣ ಆಲನಹಳ್ಳಿ, ಗಿರೀಶ್ ಕಾರ್ನಾಡ್, ಯು.ಆರ್.ಅನಂತಮೂರ್ತಿ, ಬರಗೂರು ರಾಮಚಂದ್ರಪ್ಪ ಹೀಗೆ ಹಲವಾರು ಸಾಹಿತಿಗಳು ನೇರವಾಗಿ ಸಿನಿಮಾ ಕ್ಷೇತ್ರದಲ್ಲಿ ತೊಡಗಿಕೊಂಡಿದ್ದು ಇಂದು ಇತಿಹಾಸ. ಒಂದಷ್ಟು ಸಾಹಿತಿಗಳು ನೇರವಾಗಿ ಸಿನಿಮಾ ಕ್ಷೇತ್ರದಲ್ಲಿ ತೊಡಗಿಕೊಂಡರೆ ಮತ್ತಷ್ಟು ಜನ ಪರೋಕ್ಷವಾಗಿ ಸಿನಿಮಾ ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದು ಕಾಣಬಹುದು. ಅಂದರೆ ಸಿನಿಮಾಗಳಿಗೆ ತಮ್ಮ ಕವನ, ಕತೆ, ಕಾದಂಬರಿ, ನಾಟಕಗಳನ್ನು ಸಿನಿಮಾಗಳಾಗಿ ರೂಪಾಂತರಗೊಳಿಸಲು ಅನುಮತಿ ನೀಡಿ ಚಲನಚಿತ್ರ ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದು ಕಾಣಬಹುದು. ಇಲ್ಲಿ ಸಿನಿಮಾ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಪ್ರತ್ಯಕ್ಷ ಮತ್ತು ಪರೋಕ್ಷ ಸಂಬಂಧ ಬೆಸೆದಿರುವುದು ಬಹುಮುಖ್ಯ ವಿಚಾರವಾಗುತ್ತದೆ.

ಆಧುನಿಕ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತು ಸಿನಿಮಾ ಕ್ಷೇತ್ರದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಾಹಿತಿಗಳು ತೊಡಗಿಸಿಕೊಂಡು ಈ ಎರಡು ಕ್ಷೇತ್ರಗಳು ಅತ್ಯಂತ ಪ್ರಭಾವಿಶಾಲಿ ಮಾಧ್ಯಮಗಳಾಗಿ ಬೆಳೆಯಲು ಸಹಕಾರಿಯಾದರು. ಅದೇ ರೀತಿ ಕನ್ನಡ ಸಾಹಿತ್ಯ ಕೃತಿಗಳನ್ನು ಸಿನಿಮಾ ರೂಪ ಮಾಡಿ ಸಾಹಿತ್ಯವನ್ನು ಜನರಿಗೆ ತಲುಪುವಂತೆ ಮಾಡಿದ್ದು, ಸಾಹಿತ್ಯ, ಸಿನಿಮಾ, ಪ್ರೇಕ್ಷಕರ ನಡುವೆ ಅವಿನಾಭಾವ ಸಂಬಂಧ ಏರ್ಪಡಲು ಸಾಧ್ಯವಾಗಿದ್ದು ಹಲವಾರು ನಿರ್ದೇಶಕರ ಪರಿಶ್ರಮ, ಸಾಧನೆಯಿಂದ ಎಂಬುದು ಗಮನಾರ್ಹ ವಿಚಾರ. ಟಿ.ವಿ.ಸಿಂಗ್ ಠಾಕೂರ್‌ರಂತಹ ನಿರ್ದೇಶಕ ಕನ್ನಡ ಕಾದಂಬರಿಗಳಿಗೆ ಸಿನಿಮಾ ರೂಪ ನೀಡುವಲ್ಲಿ ಅತ್ಯಂತ ಪ್ರಾಮಾಣಿಕ ಒಲವು ತೋರಿದ ನಿರ್ದೇಶಕರಲ್ಲಿ ಒಬ್ಬರು. ಇವರನ್ನು ಹೊರತುಪಡಿಸಿದರೆ ಕನ್ನಡ ಸಿನಿಮಾ ಕ್ಷೇತ್ರದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ ಸಾಹಿತ್ಯ ಕೃತಿಗಳನ್ನು ಚಲನಚಿತ್ರಗಳಾಗಿಸಿ ಅತ್ಯಂತ ಯಶಸ್ಸನ್ನು ಸಿನಿಮಾ ಮತ್ತು ಸಾಹಿತ್ಯ ಕೃತಿಗೆ ತಂದುಕೊಟ್ಟವರಲ್ಲಿ ದಿ.ಪುಟ್ಟಣ್ಣ ಕಣಗಾಲ್ ಒಬ್ಬರು. ಇವರ ಸೇವೆ ತುಂಬಾ ವಿಶಿಷ್ಟವಾಗಿರುವಂತಹುದು. ಇವರು ನಿರ್ದೇಶನ ಮಾಡಿದ ಬಹುಪಾಲು ಚಿತ್ರಗಳು ಕಾದಂಬರಿ, ಕತೆಯನ್ನು ಆಧರಿಸಿದ್ದು ಎಂಬುದು ಪ್ರಶಂಸನೀಯ ವಿಚಾರವಾಗಿದೆ. ಇವರ ಸಾಹಿತ್ಯ ಕೃತಿಗಳ ಆಧಾರಿತ ಸಿನಿಮಾಗಳು ಬಹುಪಾಲು ಯಶಸ್ವಿಯಾಗಿವೆ. ತ್ರಿವೇಣಿಯವರ ಕಥೆ ಆಧಾರಿತ 'ಬೆಳ್ಳಿಮೋಡ' ಹಾಗು 'ಮೊಣಚು' ಕಾದಂಬರಿ ಆಧಾರಿತ 'ಶರಪಂಜರ' (1971), ಎಂ.ಕೆ.ಇಂದಿರಾ ರವರ ಕಾದಂಬರಿ

ಆಧಾರಿತ 'ಗೆಜ್ಜೆ ಪೂಜೆ' (1970), ಭಾರತಿ ಸುತರ ಕಾದಂಬರಿ ಆಧಾರಿತ 'ಎಡಕಲ್ಲು ಗುಡ್ಡದ ಮೇಲೆ' (1973), ಬಿ. ಪುಟ್ಟಸ್ವಾಮಯ್ಯನವರ ಕತೆ ಆಧಾರಿತ 'ಮಲ್ಲಮ್ಮನ ಪವಾಡ', ಆರ್ಯಾಂಬ ಪಟ್ಟಾಬಿರವರ ಕತೆ ಆಧಾರಿತ 'ಕಪ್ಪು ಬಿಳುಪು', 1976 ರಲ್ಲಿ ವೀಣಾ ಶಾಂತೇಶ್ವರರವರ 'ಅತಿಥಿ' ಕತೆ, ಈಶ್ವರ ಚಂದ್ರರ 'ಮುನಿತಾಯಿ' ಕತೆ, ಗಿರಡ್ಡಿ ಗೋವಿಂದರಾಜರ 'ಹಂಗು' ಕತೆ ಈ ಮೂರು ಕಥೆಗಳನ್ನು ಆಧಾರಿತ 'ಕಥಾಸಂಗಮ'(1976) ಯಶಸ್ವಿ ಹೊಸ ಪ್ರಯೋಗ, ತ.ರಾ.ಸು.ರ ಮೂರು ಕಾದಂಬರಿಗಳ ಆಧಾರಿತ 'ನಾಗರಹಾವು', ಚಿತ್ರಗಳು ಅದ್ಭುತ ಯಶಸ್ಸನ್ನು ಪಡೆದಿವೆ. ಇವೆಲ್ಲವು ಕೂಡ ವ್ಯಾಪಾರಿ ಚಿತ್ರಗಳು ಎಂಬುದು ಕೂಡ ಗಮನಾರ್ಹ. ಇವುಗಳಲ್ಲದೆ ಮಸಣದ ಹೂ, ಉಪಾಸನೆ, ಬಿಳಿಹೆಂಡ್ತಿ, ಫಲಿತಾಂಶ, ಅಮೃತಗಳಿಗೆ, ಇನ್ನು ಹಲವಾರು ಸಾಹಿತ್ಯಕೃತಿಗಳನ್ನು ಆಧಾರಿತ ಚಿತ್ರಗಳನ್ನು ನೀಡಿದ ಹೆಗ್ಗಳಿಕೆ ಶ್ರೀ. ಪುಟ್ಟಣ್ಣ ಕಣಗಾಲ್‌ರಿಗೆ ಸಲ್ಲುತ್ತದೆ. ಸಾಹಿತ್ಯ ಕೃತಿಗಳ ಆಧಾರಿತ ಚಿತ್ರಗಳನ್ನು ಯಶಸ್ವಿಯಾಗಿ ಮುನ್ನಡೆಸಿದ ಕೀರ್ತಿಯು ಕಣಗಾಲ್‌ರಿಗೆ ಸಲ್ಲುತ್ತದೆ.

ಪುಟ್ಟಣ್ಣನಂತಹವರ ಸೃಜನಶೀಲ ನಿರ್ದೇಶನದೊಂದಿಗೆ ಸಾಹಿತ್ಯಕ್ಕೂ ಕೂಡ ಒಂದಷ್ಟು ತಾರಮೌಲ್ಯ ಸಿಕ್ಕಿದ್ದು ಕೂಡ ಮುಖ್ಯವಾಗಿದೆ. ಇಂತಹವರ ಜೊತೆಗೆ ಸಿದ್ಧಲಿಂಗಯ್ಯನಂತಹ ಅಪ್ಪಟ ಪ್ರತಿಭೆ ಕನ್ನಡ ಸಿನಿಮಾ ಜಗತ್ತಿನಲ್ಲಿ ಒಂದಷ್ಟು ಇತಿಹಾಸವನ್ನು ಸೃಷ್ಟಿಸಿದ್ದು ಪ್ರಶಂಸನೀಯ. ಸಿದ್ದಲಿಂಗಯ್ಯನವರು ಕೂಡ ಸಾಹಿತ್ಯ ಕೃತಿಗಳನ್ನು ಯಶಸ್ವಿ ಸಿನಿಮಾ ಮಾಡಿದ್ದಾರೆ. ಗೋರೂರು ರಾಮಸ್ವಾಮಿ ಅಯ್ಯಂಗಾರ್ ರ ಕತೆಯನ್ನು 'ಭೂತಯ್ಯನ ಮಗ ಅಯ್ಯು' ಎಂಬ ಸಿನಿಮಾ ಮಾಡಿ ಅದ್ಭುತ ಯಶಸ್ಸು ಪಡೆದಿದ್ದು ಕಂಡಿದ್ದೇವೆ. ಅದರ ಜೊತೆಗೆ ಟಿ.ಕೆ.ರಾಮರಾವ್ ಕಾದಂಬರಿಯಾಧಾರಿತ 'ಬಂಗಾರದ ಮನುಷ್ಯ' ಚಿತ್ರವಂತು ಇಂದಿಗೂ ಕನ್ನಡ ಚಲನಚಿತ್ರ ಇತಿಹಾಸದಲ್ಲಿ ಮುರಿಯದ ವಿಶಿಷ್ಟ ಇತಿಹಾಸ ನಿರ್ಮಿಸಿದ ಚಿತ್ರವಾಗಿದೆ. ಈ ಸಿನಿಮಾದ ಪ್ರಭಾವವು ಅತ್ಯಂತ ಪರಿಣಾಮಕಾರಿಯಾಗಿ ಬೀರಿರುವುದು ನಮ್ಮ ಮುಂದಿದೆ. ಸಾಹಿತ್ಯ ಕೃತಿಯಲ್ಲಿನ ಮೌಲ್ಯಯುತ ಅಂಶಗಳು ಚಲನಚಿತ್ರ ಯಶಸ್ವಿಯಾಗಲು ಕಾರಣವಾಯಿತು ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಇಂತಹ ಕಾರ್ಯಗಳು ಸಾಹಿತ್ಯ ಮತ್ತು ಸಿನಿಮಾದ ಸಂಬಂಧ ಬೆಸೆಯುವಲ್ಲಿ ಬಹು ಮುಖ್ಯಪಾತ್ರ ವಹಿಸಿವೆ. ಗೀತಪ್ರಿಯರವರು ನಿರ್ದೇಶನದ ಉಷಾ ನವರತ್ನಂರವರ ಕಾದಂಬರಿ ಆಧಾರಿತ 'ಹೊಂಬಿಸಲು' (1978) ಪ್ರಚಂಡ ಯಶಸ್ಸನ್ನು ಪಡೆಯಿತು. ಎಂ.ಆರ್.ವಿಥಲ್ ನಿರ್ದೇಶನದ ಶ್ರೀನಿವಾಸ ಕೊರಟಿ ಅವರ ಕಾದಂಬರಿ ಆಧಾರಿತ 'ಮಿಸ್ ಲೀಲಾವತಿ' (1965) ಶರತ್ಚಂದ್ರ ಚಟರ್ಜಿ ಕತೆ ಆಧಾರಿತ 'ತೂಗುದೀಪ' 1965 ಯಶಸ್ವಿಯಾಗಿವೆ. ಕೆ.ಎಸ್.ಎಲ್.ಎನ್ ಸ್ವಾಮಿರವರು ನಿರ್ದೇಶಿಸಿದ 'ಆರುಮೂರು ಒಂಭತ್ತು' (1970) ಅನ್ನಪೂರ್ಣರವರ ಕತೆ ಆಧಾರಿತ ಚಿತ್ರ ಡಿ.ರಾಜೇಂದ್ರ ಸಿಂಗ್‌ಬಾಬುರವರು ನಿರ್ದೇಶನದ ಹೆಚ್.ಆರ್.ಅನಂತರಾವ್ ಕಾದಂಬರಿ ಆಧಾರಿತ 'ಅಂತ' (1980), ವೇಮುಜೋಷಿ ಕತೆ

ಆಧಾರಿತ 'ಮುತ್ತಿನ ಹಾರ'(1993) ತ್ರಿವೇಣಿ ಕಾದಂಬರಿ ಆಧಾರಿತ 'ಹೂವು ಹಣ್ಣು', 'ಬಂಧನ' ಇವೆಲ್ಲ ಚಲನಚಿತ್ರಗಳು ಕೂಡ ಯಶಸ್ವಿಯಾದ ಚರಿತ್ರೆಯಿದೆ. ಶ್ರೀಕೃಷ್ಣ ಆಲನಹಳ್ಳಿಯವರ ಮೂರು ಕಾದಂಬರಿಗಳಾದ 'ಕಾಡು', 'ಪರಸಂಗದ ಗೆಂಡೆತಿಮ್ಮ', 'ಭುಜಂಗಯ್ಯನ ದಶಾವತಾರಗಳು' ಎರಡು ಕತೆಗಳಾದ 'ಗೀಜಗನ ಗೂಡು', 'ಪಿನಿಕ್ಸ್' ಇವೆಲ್ಲವು ಯಶಸ್ವಿಯಾಗಿವೆ.

ಎನ್. ಲಕ್ಷ್ಮೀನಾರಾಯಣ್‌ರವರು ಪೂರ್ಣಚಂದ್ರ ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು' (1973), ಚದುರಂಗರ ಕಾದಂಬರಿ ಆಧಾರಿತ 'ಉಯ್ಯಾಲೆ' (1969), ವಿ.ಎಂ. ಇನಾಂದರ್‌ರ ಕಾದಂಬರಿ ಆಧಾರಿತ 'ಮುಕ್ತಿ' (1971), ಎಲ್‌ಎಸ್ ಶೇಷಗಿರಿರಾಯರ ಸಣ್ಣಕಥೆ ಆಧಾರಿತ ಮುಯ್ಯಿ (1979), 'ಬೆಟ್ಟದ ಹೂ' (1985) ಚಿತ್ರಗಳನ್ನು ನಿರ್ದೇಶಿಸಿ ಯಶಸ್ವಿಯಾಗಿಸಿದ್ದರು. ಗಿರೀಶ್ ಕಾಸರವಳ್ಳಿರವರು ಅತ್ಯಂತ ಸೃಜನಶೀಲ ನಿರ್ದೇಶಕರಾಗಿ ಹೆಚ್ಚು ಸಾಹಿತ್ಯ ಕೃತಿ ಆಧಾರಿತ ಸಿನಿಮಾಗಳನ್ನು ಮಾಡಿದ್ದು ಗಮನಾರ್ಹ ವಿಚಾರ. ಇವರು ಅನಂತಮೂರ್ತಿರವರ ಕಥೆ ಆಧಾರಿತ 'ಘಟಶ್ರಾದ್ಧ', ಪೂರ್ಣಚಂದ್ರ ತೇಜಸ್ವಿಯವರ ಕತೆ ಆಧಾರಿತ 'ತಬರನ ಕತೆ', ಕುಂ. ವೀರಭದ್ರಪ್ಪನವರ ಕಾದಂಬರಿ ಆಧಾರಿತ 'ಕೂರ್ಮಾವಾತರ', 'ಹಸಿನಾ', 'ಗುಲಾಬಿ ಟಾಕೀಸು', 'ಕ್ರೌರ್ಯ', 'ದ್ವೀಪ', 'ನಾಯಿನೆರಳು' ನಿರ್ದೇಶಿಸಿದ್ದಾರೆ. ಎ.ಎನ್ ಮೂರ್ತಿರಾಯರ ಆಷಾಢಭೂತಿ ನಾಟಕ 'ಸುಬ್ಬಾಶಾಸ್ತ್ರಿ' (1968) ಆಗಿ ಯಶಸ್ವಿಯಾಗಿ ಸದಭಿರುಚಿಯ ಚಿತ್ರವಾಗಿದೆ. ವಿ.ಸೀತಾರಾಮಯ್ಯನವರ ಕಥೆ ಆಧಾರಿತ 'ಪಾಪಪುಣ್ಯ' (1977), ಎಂ.ವಿ.ಇನಾಂದರ್‌ರವರ ಕಾದಂಬರಿ ಆಧಾರಿತ 'ಮುಕ್ತಿ' (1971) ಚಿತ್ರಗಳು ಯಶಸ್ವಿಯಾಗಿವೆ. ಅನಂತಮೂರ್ತಿರವರ ಕಾದಂಬರಿ 'ಸಂಸ್ಕಾರ'ವನ್ನು ಪಟ್ಟಾಭಿರಾಮ ರೆಡ್ಡಿ ನಿರ್ದೇಶಿಸಿದ್ದಾರೆ. ಎಸ್.ಎಲ್.ಭೈರಪ್ಪನವರ 'ವಂಶವೃಕ್ಷ' ಕಾದಂಬರಿಯನ್ನು ಗಿರೀಶ್ ಕಾರ್ನಾಡ್‌ರು ನಿರ್ದೇಶಿಸಿದ್ದಾರೆ. ಹಾಗು ಆಲನಹಳ್ಳಿಯವರು 'ಕಾಡು', ಕುವೆಂಪುರವರ 'ಕಾನೂರು ಹೆಗ್ಗಡತಿ' ಕಾದಂಬರಿಗಳನ್ನು ಕಾರ್ನಾಡರು ಸಿನಿಮಾ ರೂಪ ನೀಡಿದ್ದಾರೆ.

ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿ ಆಧಾರಿತ ಚಿತ್ರವನ್ನು ನಿರ್ದೇಶಿಸಿದ ಬಿ.ವಿಕಾರಂತರು ಚಿತ್ರವನ್ನು ಯಶಸ್ವಿಯಾಗಿಸಿದ್ದರು. ಜೊತೆಗೆ ಆಸ್ಕರ್ ಪ್ರಶಸ್ತಿಗೆ ಹೋದ ಮೊದಲ ಕನ್ನಡ ಚಿತ್ರವಾಗಿತ್ತು ಎಂಬುದು ಹೆಮ್ಮೆಯ ವಿಷಯ. ಜೊತೆಗೆ ರಾಷ್ಟ್ರ ಪ್ರಸಸ್ತಿಯನ್ನು ಪಡೆದಿತ್ತು. ಶಿವರಾಮ ಕಾರಂತರು ಸಹ 'ಮಲೆಯಮಕ್ಕಳು' (1978), 'ಭೂತರಾಜ್ಯ', 'ಡೋಮಿಂಗೊ' ಎಂಬ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಬಸವರಾಜಕಟ್ಟಿಮನಿರವರ ಕಾದಂಬರಿ ಆಧಾರಿತ ಚಿತ್ರ 'ಮಾಡಿ ಮಡಿದವರು' ಚಿತ್ರವಾಗಿದೆ. ಚಂದ್ರಶೇಖರ ಕಂಬಾರರ ಹಲವಾರು ನಾಟಕಗಳು ಸಿನಿಮಾಗಳಾಗಿವೆ. 'ನಾಗಮಂಡಲ', 'ಋಷ್ಯಶೃಂಗ'ಗಳನ್ನು ಉದಹರಿಸಬಹುದು. ಸ್ವತಃ ಕಂಬಾರರು 1981 ರಲ್ಲಿ 'ಸಂಗೀತಾ' ಎಂಬ ಸಿನಿಮಾವನ್ನು ನಿರ್ದೇಶನ ಮಾಡಿದ್ದಾರೆ. ಪಿ.ಲಂಕೇಶರ ಕಾದಂಬರಿಗಳಾದ 'ಮುಸ್ಸಂಜೆ ಕಥಾ ಪ್ರಸಂಗ'ವನ್ನು

'ಅಪ್ಪ' ಆಗಿ, 'ಅಕ್ಕ' ಕಾದಂಬರಿಯನ್ನು 'ದೇವಿರಿ' ಎಂಬ ಚಿತ್ರಗಳನ್ನಾಗಿಸಿ ಕವಿತಾ ಲಂಕೇಶ್‌ರವರು ನಿರ್ದೇಶಿಸಿದ್ದಾರೆ. ಸ್ವತಃ ಲೇಖಕರಾದ ಲಂಕೇಶರು 'ಪಲ್ಲವಿ' ಸಿನಿಮಾವನ್ನು ನಿರ್ದೇಶಿಸಿ ರಾಷ್ಟ್ರ ಪ್ರಶಸ್ತಿಯನ್ನು ಪಡೆದಿದ್ದಾರೆ. ಹಾಗೆ 'ಎಲ್ಲಿಂದಲೋ ಬಂದವರು' ಎಂಬ ಸದಭಿರುಚಿಯ ಚಿತ್ರವನ್ನು ನಿರ್ದೇಶಿಸಿದ್ದಾರೆ. ಬರಗೂರು ರಾಮಚಂದ್ರಪ್ಪನವರು 'ಬೆಂಕಿ', 'ಸೂರ್ಯ' 'ಒಂದು ಊರಿನ ಕಥೆ' ಕಾದಂಬರಿಗಳನ್ನು ಚಿತ್ರ ರೂಪ ನೀಡಿ ನಿರ್ದೇಶಿಸಿದ್ದಾರೆ. ಹಾಗೆ ಜಾನಪದ ಕಥನ ಆಧಾರಿತ 'ಭಾಗೀರತಿ' ಸಿನಿಮಾವನ್ನು ತೆರೆಗೆ ತಂದು ಯಶಸ್ವಿಯಾಗಿಸಿದ್ದಾರೆ. ಎಂ.ಕೆ. ಇಂದಿರಾರವರ 'ಫಣಿಯಮ್ಮ' ಕಾದಂಬರಿಯನ್ನು ಪ್ರೇಮಾಕಾರಂತರು ನಿರ್ದೇಶಿಸಿದ್ದಾರೆ. ವಿಜಯ ಸಾಸನೂರುರವರ ಕಾದಂಬರಿ ಆಧಾರಿತ ಚಿತ್ರ 'ರಥಸಪ್ತಮಿ' (1986) ಯಶಸ್ವಿಯಾಗಿದೆ. ಕುಂ.ವೀರಭದ್ರಪ್ಪನವರ ಕಥೆ 'ಬೇಟೆ' ಆಧಾರಿತ 'ಮನ ಮೆಚ್ಚಿದ ಹುಡುಗಿ' ಚಿತ್ರ ಟಿ.ಎಸ್.ನಾಗಾಭರಣರವರು ನಿರ್ದೇಶಿಸಿ ಯಶಸ್ವಿ ಚಿತ್ರವಾಗಿಸಿದ್ದಾರೆ. ಇವಲ್ಲದೆ ಶಿವರಾಮಕಾರಂತರ 'ಚಿಗುರಿದ ಕನಸು' ಕಾದಂಬರಿಯನ್ನು ಸಿನಿಮಾ ಮಾಡಿದ್ದಾರೆ. ಚಂದ್ರಶೇಖರ ಕಂಬಾರರ 'ನಾಗಮಂಡಲ' ನಾಟಕ, 'ಸಿಂಗಾರವ್ವ ಮತ್ತು ಅರಮನೆ' ಕಾದಂಬರಿಯನ್ನು ಸಿನಿಮಾ ರೂಪ ನೀಡಿದ್ದಾರೆ. ಹಾಗೆಯೇ, 'ಜನುಮದ ಜೋಡಿ', 'ಚಿನ್ನಾರಿ ಮುತ್ತಾ', 'ಕಲ್ಲರಳಿ ಹೂವಾಗಿ' ಇನ್ನಿತರ ಸಾಹಿತ್ಯಕೃತಿಗಳನ್ನು ಆಧರಿಸಿ ಸಿನಿಮಾ ಮಾಡಿ ಯಶಸ್ವಿಯಾದ ಹೆಗ್ಗಳಿಕೆ ನಾಗಾಭರಣರವರದು. 'ತಬ್ಬಲಿ ನೀನಾದೆ ಮಗನೆ', 'ನಾಯಿ ನೆರಳು', 'ಅನುರಕ್ತೆ', 'ಅಮೃತಘಳಿಗೆ','ಮಲೆಯ ಮಕ್ಕಳು' ಕೃತಿಗಳು ಸಿನಿಮಾಗಳಾಗಿವೆ. ಜೇಮ್ಸ್‌ಬಾಂಡ್ ಕಲ್ಪನೆಯನ್ನು ಕನ್ನಡಕ್ಕೆ ಪರಿಚಯಿಸಿದ ದೊರೆಭಗವಾನ್‌ರು ನಿರ್ದೇಶಿಸಿದ ಸರಣಿ ಚಿತ್ರಗಳು ಕಾದಂಬರಿ ಆಧಾರಿತವಾಗಿದ್ದು ವಿಶೇಷ. ರಾಜ್‌ಕುಮಾರ್ ಅಭಿನಯದ ನಾಂದಿ, ಉಯ್ಯಾಲೆ, ಜೀವನ ಚೈತ್ರ, ಕಾಮನಬಿಲ್ಲು, ಎರಡು ಕನಸು ಹೀಗೆ ಸಾಲು ಸಾಲು ಚಿತ್ರಗಳು ಸಾಹಿತ್ಯ ಕೃತಿಯಿಂದ ಪ್ರೇರಣೆ ಪಡೆದ ಚಿತ್ರಗಳು ನಮ್ಮ ಇತಿಹಾಸದಲ್ಲಿವೆ.

ಕನ್ನಡ ಚಲನಚಿತ್ರದ ಇತಿಹಾಸವನ್ನು ನಾವು ಅವಲೋಕಿಸಿದಷ್ಟು ದೊಡ್ಡ ಮಟ್ಟದ ಯಶಸ್ಸು ಎನ್ನುವುದು ಸಿಕ್ಕಿದ್ದು ಆ ದಿನಗಳಲ್ಲಿ ಮಾತ್ರ ಸಾಹಿತ್ಯ ಕೃತಿಯನ್ನು ಆಧಾರಿತವಾಗಿ ಮಾಡಿದ ಚಲನಚಿತ್ರಗಳು ಎಂಬುದು ಸತ್ಯಸಂಗತಿಯಾಗುತ್ತದೆ. ಹೀಗೆ ಕನ್ನಡ ಸಾರಸ್ವತ ಲೋಕದೊಂದಿಗೆ ಕನ್ನಡ ಚಲನಚಿತ್ರ ರಂಗ ಬೆಳೆಸಿಕೊಂಡ ನಂಟು ಹಲವು ಬಗೆಯಲ್ಲಿ ನಮ್ಮ ಕಣ್ಣ ಮುಂದೆ ತೋರುತ್ತದೆ. ಒಂದಕ್ಕೊಂದು ಪೂರಕವಾದ ಅನನ್ಯ ಅನುಭವವನ್ನು ಈ ಎರಡು ಕ್ಷೇತ್ರಗಳಲ್ಲಿಯು ಹೊಂದಿತ್ತು ಎಂಬುದು ವಿಶೇಷವಾಗುತ್ತದೆ.

## 2.3 ಚಲನಚಿತ್ರದ ಮಹತ್ವ

ಸಿನಿಮಾ ಎಂದರೆ ಬರೀ ಮನರಂಜನೆಯಷ್ಟೇ ಅಲ್ಲ ಎಂಬುದನ್ನು ಇಡಿ ಚಲನಚಿತ್ರ ಕ್ಷೇತ್ರ ಮರೆತಿದೆ. ಸಿನಿಮಾ ಕ್ಷೇತ್ರದಿಂದ ಸಮಾಜದಲ್ಲಾಗುವ ಬದಲಾವಣೆ ತುಂಬಾ ಪ್ರಭಾವಶಾಲಿ ಎನ್ನುವ ಅಂಶವನ್ನು ಈ ಕ್ಷೇತ್ರ ಗಮನಕ್ಕೆ ತೆಗೆದುಕೊಳ್ಳದೇ ಇರುವುದು ಅತ್ಯಂತ ದಯನೀಯ ಸ್ಥಿತಿಯಾಗಿದೆ. ದೃಶ್ಯ ಮಾಧ್ಯಮದಿಂದಾಗುವ ಪರಿಣಾಮ ಕಡಿಮೆಯಾದದ್ದಲ್ಲ. ಒಂದು ಸಿನಿಮಾವನ್ನು ನೋಡಿ ಅದರ ಪ್ರಭಾವದಿಂದ ಸಮಾಜದಲ್ಲಿ ಅಭೂತಪೂರ್ವ ಬದಲಾವಣೆಗಳಾಗಿರುವುದು ನಮ್ಮ ಮುಂದಿದೆ. ಬಂಗಾರದ ಮನುಷ್ಯದಂತಹ ಸಿನಿಮಾ ನೋಡಿ ವಿದ್ಯಾವಂತ ವರ್ಗ ಮತ್ತೆ ಹಳ್ಳಿಗಳಿಗೆ ಹಿಂತಿರುಗಿ ಕೃಷಿ ಕ್ಷೇತ್ರದಲ್ಲಿ ತೊಡಗಿಸಿಕೊಂಡ ಉದಾಹರಣೆಯಿದೆ. ಆಟೋರಾಜದಂತಹ ಸಿನಿಮಾ ನೋಡಿ ವಿದ್ಯಾವಂತರು ಸರ್ಕಾರಿ ಕೆಲಸವೊಂದೇ ಶ್ರೇಷ್ಠವಲ್ಲ, ಸ್ವಯಂ ಕೃಷಿಯು ಶ್ರೇಷ್ಠ ಕಾರ್ಯವೇ ಎಂದು ವೈಯಕ್ತಿಕವಾಗಿ ಬದಲಾದ ಉದಾಹರಣೆಗಳು ನಮ್ಮಲ್ಲಿ ಹಲವಾರು ಇವೆ. ಇವನ್ನು ಮಾತ್ರ ಕೇವಲ ಪ್ರಾತಿನಿಧಿಕವಾಗಿ ಉದಹರಿಸಬಹುದಷ್ಟೆ. ನಾವು ಇಷ್ಟೆಲ್ಲ ಚರ್ಚೆಗೆ ಒಳಪಡಬೇಕಾದ ಅನಿವಾರ್ಯತೆ ಯಾಕೆ ಬಂತು ಎಂಬುದನ್ನೆ ಆಲೋಚಿಸಿದರೆ ಅದೇ ಹಳೆಯ ಮುಂದುವರಿಕೆಗಳಾಗಿ ಇಂದು ಲಾಂಗು, ಮಚ್ಚು, ಹಿಂಸೆಯ ಸಿನಿಮಾಗಳಿಂದ ಯುವಕರಲ್ಲಿ ನಾನು ಕೂಡ ಸಿನಿಮಾದ ರೌಡಿಯ ಹಾಗೆ ಸಮಾಜದಲ್ಲಿ ಮೆರೆಯಬಹುದು, ಹಣ ಗಳಿಸಬಹುದು ಎಂಬ ಭ್ರಮೆಯಲ್ಲಿ ಮುಳುಗಿ ಭೂಗತ ಚಟುವಟಿಕೆಗಳಿಗೆ ಇಳಿಯುತ್ತಾನೆ. ಕೊನೆಗೆ ಸಿನಿಮಾ ಬೇರೆ ನಿಜ ಜೀವನ ಬೇರೆ ಎಂದು ತಿಳಿಯುವುದರಲ್ಲಿಯೇ ದುರಂತದ ಸಾವಿಗೆ ಒಳಗಾಗಿರುತ್ತಾನೆ. ಇಂತಹ ಬೆಳವಣಿಗೆಗೆ ಕಾರಣವಾಗುವುದು ಸಿನಿಮಾದ ಪ್ರಭಾವ ಎಂಬುದರಲ್ಲಿ ಅನುಮಾನವಿಲ್ಲ. ಹಾಗಾಗಿ ಪ್ರೇಕ್ಷಕರು ಈ ರೀತಿಯಾದ ಸಿನಿಮಾ ಕ್ಷೇತ್ರಕ್ಕೆ ಪ್ರಭಾವಿತರಾಗಿ ತಪ್ಪು ಹಾದಿಗೆ ಬರುವುದನ್ನು ತಪ್ಪಿಸಬೇಕಾದಲ್ಲಿ ಸಮಾಜದಲ್ಲಿ ಮೌಲ್ಯಯುತ ಜವಾಬ್ದಾರಿ ಇರುವ ಸಿನಿಮಾಗಳು ಇಂದು ತಯಾರಾಗಬೇಕಿದೆ. ಆ ನಿಟ್ಟಿನಲ್ಲಿ ಕನ್ನಡ ಸಾಹಿತ್ಯದೊಂದಿಗೆ ಇದ್ದ ಅದಮ್ಯ ಸಂಬಂಧ ಮುಂದುವರಿಸುವುದು ಅನಿವಾರ್ಯವಾಗಿದೆ.

ಚಲನಚಿತ್ರದ ಮಹತ್ವವನ್ನು ನಾವು ಅವಲೋಕಿಸಿದರೆ ಮಹತ್ವಪೂರ್ಣ ಪರಿಣಾಮಕಾರಿ ಸಂದೇಶಗಳನ್ನು ಮನರಂಜನೆಯ ಜೊತೆ ಜೊತೆಗೆ ನೀಡುತ್ತಾ ಬಂದಿರುವುದು ವಿಶೇಷವಾಗುತ್ತದೆ. ಸಿನಿಮಾ ಕ್ಷೇತ್ರ ತನ್ನದೇ ರೀತಿಯ ಮಹತ್ವವನ್ನು ಒಳಗೊಂಡಿದೆ. ಚಲನಚಿತ್ರ ಎಂದಾಕ್ಷಣ ಕೇವಲ ಮನರಂಜನೆ ಎಂಬಂತಹ ಆಲೋಚನೆಯಲ್ಲಿ ಪ್ರೇಕ್ಷಕ ತೊಡಗಿರುತ್ತಾನೆ. ಆದರೆ ಅದರಲ್ಲಿ ಹಲವಾರು ಸಮಾಜದ ಓರೆ ಕೋರೆ, ಸಮಸ್ಯೆಗಳಿಗೆ ಪರಿಹಾರವನ್ನು ನೀಡುವುದು ಆಗಿರುತ್ತದೆ. ಚಲನಚಿತ್ರದ ಮಹತ್ವವನ್ನು ಈ ರೀತಿ ವಿವರಿಸಬಹುದು.

1. **ಸಾಂಸ್ಕೃತಿಕ ಉದ್ದೇಶ**
2. **ಸಾಮಾಜಿಕ ಹಿನ್ನೆಲೆ**
3. **ತಾಂತ್ರಿಕ ಪ್ರಗತಿಯ ಹಿನ್ನೆಲೆ**
4. **ಮನರಂಜನೆ ಉದ್ದೇಶ**
5. **ಬಹುಮುಖಿ ಬದುಕಿನ ದರ್ಶನ**
6. **ಜ್ಞಾನಸೃಷ್ಟಿ**
7. **ಕಲಾ ಪ್ರಯೋಜನ**

1. **ಸಾಂಸ್ಕೃತಿಕ ಉದ್ದೇಶ:–** ಸಾಂಸ್ಕೃತಿಕ ಜಗತ್ತು ಎಂಬಲ್ಲಿ ಕಲೆಗೆ ಬಹುಮುಖ್ಯ ಪ್ರಾಶಸ್ತ್ಯ ಸಿಗುತ್ತದೆ. ಕಲೆಗು ಸಾಂಸ್ಕೃತಿಕತೆಗು ನಂಟಿದೆ. ಹಲವಾರು ಕಲಾಪ್ರಕಾರಗಳಲ್ಲಿ ಸಿನಿಮಾ ಕೂಡ ವೈವಿಧ್ಯಮಯ ರೂಪವಾಗಿದೆ. ಇಂತಹ ಚಲನಚಿತ್ರ ಸಾಂಸ್ಕೃತಿಕ ಬದುಕನ್ನು ಬೆಳೆಸಲು ಸಹಕಾರಿಯಾಗುತ್ತದೆ. ಒಂದು ಸಮಾಜದ ಸಮಸ್ಯೆ ಪರಿಹಾರಾತ್ಮಕವಾದ ರೀತಿಯಲ್ಲಿ ಕಾರ್ಯನಿರ್ವಹಿಸಬಲ್ಲದು. ದೇಶ, ನಾಡು, ನುಡಿಯನ್ನು ಶ್ರೀಮಂತಗೊಳಿಸಿರುವುದು 'ಸಾಂಸ್ಕೃತಿಕ' ಪ್ರಕ್ರಿಯೆಗಳೇ ಎಂಬುದು ವಿಶೇಷ. ನಮ್ಮ ಸಾಂಸ್ಕೃತಿಕ ಚೌಕಟ್ಟಿನಲ್ಲಿ ಪ್ರವಹಿಸಿರುವ ಹಲವಾರು ಅಂಶಗಳು ತನ್ನಿಂದ ತಾನೇ ದೇಶ ಭಾಷೆಗಳ ಬೆಳವಣಿಗೆಗೆ ಕಾರಣವಾಗುತ್ತದೆ. ಸಿನಿಮಾ ಎಂಬ ಸಾಂಸ್ಕೃತಿಕ ಕ್ಷೇತ್ರದಲ್ಲಿ ಕನ್ನಡದಲ್ಲಿ ರಾಜ್‌ಕುಮಾರ್ ಎಂಬ ಪ್ರತಿಭೆ ಅತ್ಯಂತ ಮೇಲ್ಮಟ್ಟದಲ್ಲಿ ನಿಲ್ಲುತ್ತದೆ. ಅವರಂತೇ ಹಲವಾರು ನಟ–ನಟಿ, ತಾಂತ್ರಿಕ ವರ್ಗ ಎಲ್ಲರಿಂದಲೂ ಕನ್ನಡ, ಕರ್ನಾಟಕದ ಸಾಂಸ್ಕೃತಿಕ ಬದುಕು ಅತ್ಯಂತ ಮೇರು ಮಟ್ಟದಲ್ಲಿ ಗುರುತಿಸಲು ಸಾಧ್ಯವಾಯಿತು.
2. **ಸಾಮಾಜಿಕ ಹಿನ್ನೆಲೆ:–** ಸಾಮಾಜಿಕವಾಗಿ ಚಲನಚಿತ್ರದಿಂದ ಹಲವಾರು ಉಪಯೋಗಗಳು ಸಿಗುತ್ತಿವೆ. ಒಂದು ಕಾಲದಲ್ಲಿ ಜನರಲ್ಲಿದ್ದಂತಹ ಅನೇಕ 'ಮಡಿವಂತ' ಮನಸ್ಸುಗಳನ್ನು ಬದಲಾವಣೆ ಮಾಡಿದ್ದು ಈ ರಂಗವೇ ಎಂಬುದು ಸತ್ಯ. ಒಂದು ಕಾಲದಲ್ಲಿ ಸಾಮಾಜಿಕವಾಗಿ ನಿರುದ್ಯೋಗ, ಬಡತನ, ವಿಧವಾವಿವಾಹ ಇನ್ನಿತರ ಏನೆಲ್ಲ ಸಾಮಾಜಿಕ ಸಮಸ್ಯೆಗಳಿದ್ದವೋ ಅಂತಹ ವಿಚಾರಗಳಿಗೆ ಪರಿಹಾರೋಪಾದಿಯಾಗಿ ಚಲನಚಿತ್ರ ಕ್ಷೇತ್ರ ಕೆಲಸ ಮಾಡಿದೆ. ಸಾಮಾಜಿಕವಾಗಿ ಬದಲಾವಣೆ ತರುವುದು ಚಲನಚಿತ್ರದ ಮುಖ್ಯ ಉದ್ದೇಶವು ಹೌದು. ಸಾಮಾಜಿಕ ಸಮಸ್ಯೆಗಳನ್ನು ಕುರಿತಾದ ಎಷ್ಟೋ ಸಿನಿಮಾಗಳು ಜಗತ್ತಿನಾದ್ಯಂತ ಬಂದು ಹೋಗಿವೆ. ಅವುಗಳ ಪರಿಣಾಮವು ಕೂಡ ದೊಡ್ಡ

ಮಟ್ಟದ್ದೆ ಆಗಿದೆ. ಜನರನ್ನು ಬದಲಾವಣೆಯ ಹಂತಕ್ಕೆ ತಂದು ಇರಿಸುವಲ್ಲಿ ಈ ಕ್ಷೇತ್ರ ಅತ್ಯಂತ ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಿದೆ. ಅಂತಹ ಸೃಜನಶೀಲ ಕ್ರಿಯೆಗಳಿಂದಲೆ ಸಮಾಜದಲ್ಲಿ ಅಲ್ಪಸ್ವಲ್ಪ ಬದಲಾವಣೆಗಳಾಗಿರುವುದು ಸತ್ಯವಾಗಿದೆ.

3. **ತಾಂತ್ರಿಕ ಪ್ರಗತಿ**:- ಚಲನಚಿತ್ರದಿಂದ ಹಲವಾರು ಕ್ಷೇತ್ರಗಳಲ್ಲಿ ಬದಲಾವಣೆಗಳಾಗಿವೆ. ಆ ನಿಟ್ಟಿನಲ್ಲಿ ತಾಂತ್ರಿಕವಾದ ಹೊಸ ಹೊಸ ಆವಿಷ್ಕಾರಗಳಿಗೆ ಮನುಷ್ಯ ತೆರೆದುಕೊಳ್ಳಲು ಶುರುಮಾಡಿದ್ದು ಕೂಡ ಈ ಚಲನಚಿತ್ರ ರಂಗದಿಂದಲೇ ಎಂಬುದು ಸತ್ಯ. ಮಡಿವಂತ ಸಮಾಜಕ್ಕೆ ಆಧುನಿಕ ಉಡುಗೆ ತೊಡುಗೆಯಂತಹ ಬದಲಾವಣೆ ತರುವಲ್ಲಿ ಸಿನಿಮಾ ಯಶಸ್ವಿಯಾಗಿದೆ. ಮೆಚ್ಚಿದ ನಟ-ನಟಿ ಧರಿಸಿದ ಉಡುಗೆಯನ್ನು ನಾನು ಅನುಕರಿಸಬೇಕು ಎಂಬ ಮನಸ್ಸು ಬರುತ್ತದೆ. ಹೊಸ ವಿಚಾರಕ್ಕೆ ಒಳಗಾಗುತ್ತಾರೆ. ನಿಜಕ್ಕೂ ಸಿನಿಮಾ ಕ್ಷೇತ್ರ ಎಂಬುದು ಒಂದು ವಿಶಿಷ್ಟ ಕ್ರಮದ ಪ್ರಾಯೋಗಿಕ ಕ್ಷೇತ್ರವಾಗಿ ಬೆಳೆಯುತ್ತಿದೆ.

4. **ಮನರಂಜನೆಯ ಉದ್ದೇಶ**:- ಸಿನಿಮಾ ಕ್ಷೇತ್ರದ ಆದ್ಯ ಉದ್ದೇಶ ಮನರಂಜನೆ ಬದುಕಿನ ಹಲವಾರು ಜಂಜಾಟದಿಂದ ಒಂದಷ್ಟು ಮನಸ್ಸಿಗೆ ಆರಾಮವಾಗಿರಲೆಂದು ಸಿನಿಮಾಕ್ಕೆ ಪ್ರೇಕ್ಷಕರು ಬರುತ್ತಾರೆ ಆಗ ಚಲನಚಿತ್ರವು ತುಂಬಾ ಯಶಸ್ವಿಯಾದ ಮಾಧ್ಯಮ ಎನಿಸಿಕೊಳ್ಳುತ್ತದೆ. 40-50 ರ ದಶಕದ ಕನ್ನಡ ಸಿನಿಮಾ ಇತಿಹಾಸ ನೋಡಿದರೆ ಅತ್ಯಂತ ಮನರಂಜನಾತ್ಮಕ ಪ್ರಕ್ರಿಯೆಗೆ ಸಿನಿಮಾ ಒಳಗಾಗಿತ್ತು. ಮಾಯಾಜಾಲ ಮಾಂತ್ರಿಕದಂತಹ ಬದಲಾವಣೆಗಳು ಪ್ರೇಕ್ಷಕನನ್ನು ದಂಗು ಬಡಿಸಿ ಹುಚ್ಚು ಹಿಡಿಸಿದವು. ಹಾಗೆಂದ ಮಾತ್ರಕ್ಕೆ ಆ ಸಿನಿಮಾಗಳು ಕೇವಲ ಮನರಂಜನೆಯ ಸಿನಿಮಾಗಳಾಗಿರಲಿಲ್ಲ ಎಂಬುದು ವಿಶೇಷ. ಪುರಾಣ, ಐತಿಹಾಸಿಕ, ಭಕ್ತಿ ಪ್ರಧಾನದಂತಹ ಚಿತ್ರಗಳ ಜೊತೆ ಜೊತೆ ಹೊಸ ಆವಿಷ್ಕಾರದ ಚಿತ್ರಗಳನ್ನು ನಿರ್ಮಿಸುವುದರ ಜೊತೆಗೆ ಅತ್ಯಂತ ಯಶಸ್ವಿಯಾದವು. ಅರ್ಥಗರ್ಭಿತ ಹಾಡು, ಸಂಗೀತ, ಸಂಭಾಷಣೆ, ಹಾಸ್ಯ ಎಲ್ಲವೂ ಹದವಾಗಿ ಬೆರೆತು ಪ್ರೇಕ್ಷಕರನ್ನು ರಂಜಿಸುತ್ತಿತ್ತು. ಮನರಂಜನೆಯ ಜೊತೆ ಜೊತೆಗೆ ಸಂದೇಶಗಳನ್ನು ಸಿನಿಮಾ ರವಾನಿಸುತ್ತಿದ್ದುದು ವಿಶೇಷವಾಗಿದೆ.

5. **ಬಹುಮುಖಿ ಬದುಕಿನ ದರ್ಶನ**:- ಬಿಡುವಿಲ್ಲದ ಬದುಕಿಗೆ ಒಂದು ವಿಶಿಷ್ಟವಾದ ದರ್ಶನವನ್ನು ನೀಡಿದ್ದು ಸಿನಿಮಾ ಕ್ಷೇತ್ರ. ಮನುಷ್ಯನ ಬದುಕಿಗೆ ಹಲವಾರು ರೀತಿಯ ವಿವಿಧ ಅಂಶಗಳನ್ನು ಪರಿಚಯಿಸಿತು. ಏಕತಾನತೆಗೆ ಒಳಗಾಗಿದ್ದ ಬದುಕನ್ನು ಬಹುಮುಖಿಯಾಗಿ ಮಾರ್ಪಡಿಸಿತು. ಕೇವಲ ಒಂದು ರೀತಿಯ ಬದುಕಿನ ಅನಿವಾರ್ಯತೆಗೆ ಸಿಕ್ಕಿಕೊಂಡ ಜಗತ್ತನ್ನು ಬದುಕಿನ ಹಲವಾರು ಮಜಲುಗಳನ್ನು ಪರಿಚಯಿಸಲು ಸಿನಿಮಾ ಕ್ಷೇತ್ರ ಒಳಗಾಯಿತು. ಇದರಿಂದ ಸಾರ್ಥಕತೆಯ ಜೀವನದ ಕ್ರಮವನ್ನು ಮನುಷ್ಯ ಅನುಕರಿಸಲು ಆರಂಭಿಸಿದ. ಯಾವುದೇ ಪ್ರಕಾರದ ಜೀವನವನ್ನು ವಿಶಿಷ್ಟ ಬಗೆಯಲ್ಲಿ

ನೋಡಲು ಸಾಧ್ಯವಾಯಿತು. ತಾನು, ತನ್ನ ಸಂಸಾರ, ಕೆಲಸ, ಇಷ್ಟೇ ನಮ್ಮ ಜಗತ್ತು ಎಂಬ ಭ್ರಮೆಯಲ್ಲಿದ್ದವರಿಗೆ ಸಮಾಜದ ಬಹುಮುಖ ದರ್ಶನವನ್ನು ಸಿನಿಮಾ ಮಾಡಿಸಿತು. ಇದರಿಂದ ಜೀವನದ ಹಲವು ಮಜಲುಗಳಿಗೆ ಪ್ರೇಕ್ಷಕ ಒಳಗಾಗಿದ್ದು ಸಿನಿಮಾದ ಮಹತ್ವವನ್ನು ಸಾರುತ್ತದೆ.

6. **ಜ್ಞಾನ ಸೃಷ್ಟಿ**:- ಸಿನಿಮಾ ಕೇವಲ ಮನರಂಜನೆಯನ್ನು ನೀಡುವ ಕ್ಷೇತ್ರ ಅಷ್ಟೇ ಅಲ್ಲದೆ ಅದರ ಜೊತೆಗೆ ಸಮಾಜಕ್ಕೊಂದು ಅರ್ಥ ನೀಡುತ್ತಿದೆ. ಸಿನಿಮಾವನ್ನು ನೋಡಿದ ಪ್ರೇಕ್ಷಕನಿಗೆ ಅದರ ಪರಿಣಾಮದಿಂದ ಜ್ಞಾನವು ಕೂಡ ವೃದ್ಧಿ ಆಗುತ್ತಿದೆ. ವಿಚಾರಗಳನ್ನು ತಿಳಿದುಕೊಳ್ಳುವ ಮುಖಾಂತರ ಸಮಾಜದ ಜೊತೆ ಜೊತೆಯಲ್ಲಿ ಒಂದು ವಿಶಿಷ್ಟ ಸಂಬಂಧವನ್ನು ಏರ್ಪಡಿಸಿಕೊಳ್ಳುವಲ್ಲಿ ಸಾರ್ಥಕವಾಗಿದೆ. ಒಂದಷ್ಟು ವಿಚಾರಗಳನ್ನು ತಿಳಿದುಕೊಳ್ಳುವುದರ ಮೂಲಕ ತನ್ನ ಜಡಗಟ್ಟಿದ ಬುದ್ಧಿಯನ್ನು ಕ್ರಿಯಾಶೀಲವಾಗುವಂತೆ ಮಾಡುತ್ತದೆ. ಅದರ ಜೊತೆ ಜೊತೆಗೆ ಜ್ಞಾನದ ಪರಿಧಿಯನ್ನು ಪ್ರೇಕ್ಷಕ ಹೆಚ್ಚಿಸಿಕೊಳ್ಳುತ್ತಿರುತ್ತಾನೆ. ಸಿನಿಮಾ ಮನರಂಜನೆ, ಸಂದೇಶಗಳ ಮುಖಾಂತರ ಪ್ರೇಕ್ಷಕನ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಸಹಾಯ ಮಾಡುತ್ತಿದೆ.

7. **ಕಲಾ ಪ್ರಯೋಜನ**:- ಒಂದು ನಾಡಿನ ಸಂಸ್ಕೃತಿಯನ್ನು ಬೆಳೆಸುವಲ್ಲಿ 'ಕಲೆ' ಅತ್ಯಂತ ಪರಿಣಾಮಕಾರಿ ಕಾರ್ಯ ನಿರ್ವಹಿಸುತ್ತದೆ. ಯಾವುದೇ ಒಂದು ಅಂಶವನ್ನು ಸಾಂಸ್ಕೃತಿಕತೆ, ಸಾಮಾಜಿಕತೆಗಳನ್ನು ಅತ್ಯಂತ ವೇಗ ಮತ್ತು ಪರಿಣಾಮಕಾರಿಯಾಗಿ ಬೆಳೆಸುವುದು ಕಲೆಯಾಗಿದೆ. ಸಿನಿಮಾ ಕ್ಷೇತ್ರವು ಕಲಾಕ್ಷೇತ್ರದ ಅಂಗವಾಗಿರುವುದರಿಂದ ಸಾಂಸ್ಕೃತಿಕತೆ ಬೆಳೆಯಲು ಸಹಾಯವಾಗುತ್ತಿದೆ. ಯಾವುದೇ ರೀತಿಯ ಸಾಮಾಜಿಕ ಸಾಂಸ್ಕೃತಿಕ ಕ್ರಿಯೆಯ ಅನುಕೂಲ ಪಡೆಯುವವನು ಪ್ರೇಕ್ಷಕನಾಗಿರುವುದರಿಂದ ಕಲೆಯ ಪ್ರಯೋಜನ ಅವನಿಗೆ ಸಿಗುವುದು ಕೂಡ ಪ್ರಶಂಸನೀಯ.

"ಸಾಮಾಜಿಕ ಮೌಲ್ಯಗಳನ್ನು ಬುಡಮೇಲು ಮಾಡಬಲ್ಲ ದೊಡ್ಡ ಸಾಧನ ಇದು. ಇದು ಬರವಣಿಗೆಗಿಂತಲೂ ಹೆಚ್ಚು ಅಪಾಯಕಾರಿಯಾಗಲು ಸಾಧ್ಯವಿದೆ. ಅಲ್ಲದೇ ಹಣ ಮಾಡುವುದೇ ಗುರಿಯಾದವರು ಮಾನವರ ಮಾನಸಿಕ ದೌರ್ಬಲ್ಯಗಳನ್ನು ತಮ್ಮ ಬಂಡವಾಳವನ್ನಾಗಿಸಿ ಬಳಸಿಕೊಳ್ಳುವುದರಿಂದ ಇದರಿಂದ ಬರುವ ಅಪಾಯ ಇನ್ನಷ್ಟು ಹೆಚ್ಚು ಉಚಿತ ಅಶ್ಲೀಲ ಸಾಹಿತ್ಯಕ್ಕಿಂತಲೂ ಹೆಚ್ಚಿನ ಮಾರಕ ಶಕ್ತಿ ಇದರ ದೃಕ್-ಶ್ರಾವ್ಯ ಬಿಂಬಗಳಿಗಿದೆ".[12] ಪ್ರಯೋಗಶೀಲತೆಗೆ ಹೆಸರಾಗಿದ್ದ ಬಹುಮುಖ ಪ್ರತಿಭೆ ಕಾರಂತರು ಸಿನಿಮಾದ ಸಾಧಕ ಬಾಧಕಗಳನ್ನು ಕುರಿತು ಮೇಲಿನಂತೆ ಅಭಿಪ್ರಾಯ ಪಡುತ್ತಾರೆ.ಚಲನಚಿತ್ರ ಎಂಬುದು ಎಲ್ಲವು ಒಳ್ಳೆಯದನ್ನೆ ಮಾಡುವುದಿಲ್ಲ ಬದಲಾಗಿ ಅದರಲ್ಲಿ ಕೆಡುಕು ಇರುತ್ತದೆ. ಹಾಗಾಗಿ ಯಾವುದೇ ಚಲನಚಿತ್ರ ಮಹತ್ವಗಳನ್ನಷ್ಟೇ ಹೊಂದಿರುವುದಿಲ್ಲ.ಅದು ಸಮಾಜಮುಖಿಯಾಗದ್ದಿದ್ದಾಗ ಅಪಾಯವಾಗುವ ಸಂಭವವುವಿರುತ್ತದೆ.

**ಟಿಪ್ಪಣಿಗಳು**

1. ಸಾಹಿತ್ಯ, ಶಕ್ತಿ – ಡಿ.ವಿ.ಜಿ. ಕಾವ್ಯಾಲಯ ಪ್ರಕಾಶನ ಮೈಸೂರು – 3 ನೇ ಮುದ್ರಣ 1969
2. ಕುವೆಂಪು ಸಾಹಿತ್ಯ ಪ್ರಚಾರ – ಉದಯ ರವಿ ಪ್ರಕಾಶನ ಮೈಸೂರು ಮುದ್ರಣ 2008
3. ಸಮಕ್ಷಮ: ಪುಟ 137–1992 –ಅನಂತಮೂರ್ತಿ
4. ಸಿನಿಮಾದ ಯಂತ್ರಭಾಷೆ – ಕೆ.ವಿ ಸುಬ್ಬಣ್ಣ ಪುಟ 6–1987
5. ಸಂಸ್ಕೃತಿ: ಶ್ರಮ, ಮತ್ತು ಸೃಜನಶೀಲತೆ ಬರಗೂರು ರಾಮಚಂದ್ರಪ್ಪ ಪುಟ–411
6. ಸಂಸ್ಕೃತಿ: ಶ್ರಮ, ಮತ್ತು ಸೃಜನಶೀಲತೆ ಬರಗೂರು ರಾಮಚಂದ್ರಪ್ಪ – ಪುಟ–414
7. ಜನಮನ ಬೆಸೆದ ಕಥನ ಕಲೆ(ಲೇಖನ)- ಗಂಗಾಧರ್ ಮೊದಲಿಯಾರ್, ಪ್ರಜಾವಾಣಿ,24–05–2013
8. ಕನ್ನಡ ಸಿನಿಮಾ ಇತಿಹಾಸದ ಪುಟಗಳಲ್ಲಿ- ಗಂಗಾಧರ್ ಮೊದಲಿಯಾರ್, ಪುಟ–1
9. ಕನ್ನಡ ಸಿನಿಮಾ ಇತಿಹಾಸದ ಪುಟಗಳಲ್ಲಿ- ಗಂಗಾಧರ್ ಮೊದಲಿಯಾರ್, ಪುಟ–1
10. ಕನ್ನಡ ಸಿನಿಮಾ ಇತಿಹಾಸದ ಪುಟಗಳಲ್ಲಿ- ಗಂಗಾಧರ್ ಮೊದಲಿಯಾರ್, ಪುಟ–1
11. ಕನ್ನಡ ಸಿನಿಮಾ ಇತಿಹಾಸದ ಪುಟಗಳಲ್ಲಿ- ಗಂಗಾಧರ್ ಮೊದಲಿಯಾರ್, ಪುಟ–26
12. ಶಿವರಾಮ ಕಾರಂತರ ಲೇಖನಗಳು ಭಾಗ–3 –ಸಂಪಾದಕರು- ಮಾಲಿನಿ ಮೌಲ್ಯ, ಪುಟ 201–1994

# ಅಧ್ಯಾಯ-3

# ಸಾಹಿತ್ಯಕೃತಿ ಆಧಾರಿತ ಚಲನಚಿತ್ರ ಮಾಡುವಾಗ ಎದುರಾಗುವಾಗ ಸವಾಲುಗಳು ಮತ್ತು ಸಾಧ್ಯತೆಗಳು

## 3.1 ಸಾಹಿತ್ಯ ಕೃತಿಯ ಆಧಾರಿತ ಚಲನಚಿತ್ರ ಮಾಡುವಾಗ ಎದುರಾಗುವಾಗ ಸವಾಲುಗಳು

ಒಂದು ಸಾಹಿತ್ಯ ಕೃತಿಯನ್ನು ಸಿನಿಮಾವಾಗಿಸುವಾಗ ನಿರ್ದೇಶಕರಿಗೆ ನಿಜಕ್ಕೂ ಅದು ಸವಾಲಾಗುತ್ತದೆ. ಏಕೆಂದರೆ ನೂರಾರು ಪುಟಗಳ ಅಚಿತ ರೂಪವನ್ನು ಎರಡುವರೆ ಘಂಟೆ ಅವಧಿಗೆ ದೃಶ್ಯರೂಪ ಕೊಡಬೇಕಾದಾಗ ಅದು ಸುಲಭದ ಮಾತಲ್ಲ. ಒಂದೊಂದು ಸಣ್ಣ ವಿಶ್ಲೇಷಣೆಗೂ ಹಲವಾರು ಅರ್ಥ ಸಾಧ್ಯತೆಗಳಿರುತ್ತವೆ. ಆದರೆ ಅಂತಹ ಅರ್ಥಗಳನ್ನು ಯಥಾವತ್ತಾಗಿ ಬಳಸಿಕೊಳ್ಳುವುದು ಹಲವಾರು ರೀತಿಯಲ್ಲಿ ನಿರ್ದೇಶಕನಿಗೆ ಅದು ಬಹು ಸೂಕ್ಷ್ಮ ವಿಚಾರವೆನಿಸುತ್ತದೆ. ಬರವಣಿಗೆಯ ಸಾಹಿತ್ಯಕ್ಕೆ ಅದರದ್ದೆ ಮೌಲ್ಯವಿರುತ್ತದೆ. ಅದನ್ನು ಬದಲಾಯಿಸುವುದಾಗಲಿ, ಅರ್ಥರೂಪ ಬದಲಾವಣೆಯಾಗಿ ಮಾಡಿದಾಗ ಸಹಜವಾಗಿ ಸಾಹಿತ್ಯದ ಮೌಲ್ಯ ಹಾಗು ಲೇಖಕನ ಮೌಲ್ಯ ಕುಸಿಯುತ್ತದೆ. ಇಲ್ಲಿ ಏಕ ಕಾಲದಲ್ಲಿ ನಿರ್ದೇಶಕನ ಕೈಯಲ್ಲಿ ಸಾಹಿತ್ಯ ಮತ್ತು ಲೇಖಕನ ಮೌಲ್ಯ ನಿಂತಿರುತ್ತದೆ. ಅಂತಹ ಸಂದರ್ಭದಲ್ಲಿ ಅರ್ಥ ಸಂಕುಚಿತ, ಅರ್ಥಹೀನವೋ, ಸಿನಿಮಾ ಆದಾಗ ನಿಜವಾದ ಕ್ರಮದಲ್ಲಿ ಮೊದಲು ಅವಮಾನ ಎದುರಿಸುವುದು ಸಾಹಿತ್ಯ ಕೃತಿಯೇ ಎಂಬುದರಲ್ಲಿ ನಿಜಕ್ಕೂ ಸಂದೇಹವಿಲ್ಲ. ಸಾಹಿತ್ಯ ಕೃತಿ ಯಾವುದೇ ರೀತಿಯಲ್ಲು ತನ್ನತನವನ್ನು ಕಳೆದುಕೊಳ್ಳಲು ಇಚ್ಛಿಸುವುದಿಲ್ಲ. ಆದ್ದರಿಂದಲೇ ಸಾಹಿತ್ಯಕೃತಿಯನ್ನು ಚಲನಚಿತ್ರವಾಗಿಸ ಬೇಕಾದಾಗ ನಿರ್ದೇಶಕ ಬಹು ಎಚ್ಚರಿಕೆಯಿಂದ ಕಾರ್ಯ ಪ್ರವೃತ್ತನಾಗಬೇಕಾಗುತ್ತದೆ.

ಪ್ರತಿಯೊಬ್ಬ ನಿರ್ದೇಶಕನು ಸಾಹಿತ್ಯ ಕೃತಿಯೊಂದರ ಸಿನಿಮಾ ರೂಪಾಂತರ ಮಾಡುವಾಗ ಯಥಾವತ್ತು ಸಾಹಿತ್ಯನಿಷ್ಟನಾಗಿರಬೇಕೆಂದೇನು ಇಲ್ಲ. ಬದಲಾಗಿ ಸಾಹಿತ್ಯಕ್ಕೆ ದಕ್ಕೆಯಾಗದ ಹಾಗೆ ನೋಡಿಕೊಳ್ಳುವುದು ಅವನ ಕರ್ತವ್ಯವಾಗಿರುತ್ತದೆ. ಕೆಲವು ನಿರ್ದೇಶಕರು ಸಾಹಿತ್ಯಕ್ಕೆ ಅತ್ಯಂತ ಋಣಿಯಾಗಿರುತ್ತಿದ್ದರು. "ಫ್ರೆಡ್ ಜಿನ್ನರ್ ಮೆನ್ ಎಂಬ ನಿರ್ದೇಶಕ ಹೀಗೆ ಹೇಳುತ್ತಾನೆ. ಚಲನಚಿತ್ರದ ಪ್ರಾರಂಭದಲ್ಲಿ ಲೇಖಕನು ಅಪೂರ್ವ ಕೊಡುಗೆ ನೀಡುತ್ತಾನೆ. ಸಾಹಿತ್ಯದ ಸತ್ಯ ಹಾಗೂ ಪರಿಣಾಮಗಳನ್ನು ದೃಶ್ಯಾಂತರಗೊಳಿಸುವುದಷ್ಟೇ ನನ್ನ ಕರ್ತವ್ಯ. ನಾನು ಲೇಖಕನಿಗೆ (ಸಾಹಿತ್ಯಕ್ಕೆ) ತುಂಬಾ ಹತ್ತಿರವಾಗಿ ಕೆಲಸ ಮಾಡುತ್ತೇನೆ." [1] ಇಲ್ಲಿ ಒಬ್ಬ ನಿರ್ದೇಶಕ ಸಾಹಿತ್ಯಕ್ಕೆ ಎಷ್ಟು ಬದ್ದನಾಗಿರಬೇಕೆಂಬ ದೋರಣೆಯ ಅಂಶವನ್ನು ತಿಳಿಸುತ್ತದೆ. ಸಾಹಿತ್ಯದ ಜೊತೆಯಾಗಿ ಸಿನಿಮಾ ಮುಂದುವರಿಯಬೇಕು. ಆಗ ನಿಜಕ್ಕೂ ಸಾಹಿತ್ಯ ಮತ್ತು

ಸಿನಿಮಾಕ್ಕೆ ಮೌಲ್ಯ ಬರುತ್ತದೆ. ಒಂದು ವ್ಯವಸ್ಥಿತ ಕಲ್ಪನೆಯ ಜೊತೆಯಲ್ಲಿ ನಿಲ್ಲುವ ಸಿನಿಮಾ ಸಾಹಿತ್ಯಕ್ಕೆ ಎಂದಿಗೂ ಋಣಿಯಾಗಿರಬೇಕೆಂಬ ಭಾವನೆ ಸೂಚಿಸುತ್ತಾನೆ. ಆ ಪ್ರಕಾರವಾಗಿ ಚಲನಚಿತ್ರದ ಪ್ರತಿ ಹಂತದಲ್ಲೂ ಸಾಹಿತ್ಯಕ್ಕೆ ಮೌಲ್ಯಬರುವ ಹಾಗೆ ಕ್ರಿಯಾಶೀಲನಾಗಿರುತ್ತಾನೆ. ಒಂದು ಹಂತದವರೆವಿಗೂ ಸಾಹಿತ್ಯಕ್ಕೆ ಮೌಲ್ಯ ನೀಡಿದರು ಸ್ವತಂತ್ರ ಸಿನಿಮಾ ನಿರೂಪಣೆಯೇ ನಿರ್ದೇಶಕನ ಸವಾಲಾಗಿರುತ್ತದೆ. "ಒಂದು ದೇಶದ ಜನರ ನಡೆ, ನುಡಿ, ವೇಷಭೂಷಣಗಳನ್ನು ಅಷ್ಟೇ ಏಕೆ ದೇಶದ ವ್ಯವಸ್ಥೆಯನ್ನೇ ಬದಲಿಸುವಂತಹ ಶಕ್ತಿ ಸಿನಿಮಾಕ್ಕಿದೆ. ವೈಜ್ಞಾನಿಕ ಯುಗದ ಅದ್ಭುತಗಳಲ್ಲೊಂದಾದ ಸಿನಿಮಾ ಬಹುಪಯೋಗಿ. ಶಿಕ್ಷಣ ಪ್ರಸಾರದಲ್ಲಿ ಇದು ಪಾತ್ರವಹಿಸಬಲ್ಲದು. ಐತಿಹಾಸಿಕ, ಸಾಮಾಜಿಕ, ಸಂಸ್ಕೃತಿಗಳನ್ನು ದಾಖಲಿಸಿರುವ ಚಿತ್ರಗಳು ಆಧುನಿಕ ಸಮಾಜದ ವ್ಯಕ್ತಿವಿಕಾಸಕ್ಕು ಬಹುಮುಖ್ಯ ಕಾಣಿಕೆ ಸಲ್ಲಿಸಿದೆ"[2]. ಯಾವುದೇ ಭಾಷೆಯ ಸಿನಿಮಾ ಆಗಿರಬಹುದು. ಅದು ನಿಜಕ್ಕೂ ಕಾಲಕ್ಕೆ ಅನುಗುಣವಾಗಿ ಪರಿಣಾಮಕಾರಿಯಾಗಿರುವಂತಹದ್ದು. ಯಾವುದೇ ಸಮಸ್ಯೆಯನ್ನು ಪರಿಹಾರಾತ್ಮಕವಾಗಿ ಸಿನಿಮಾ ಚಿಕಿತ್ಸಕ ಗುಣ ಸಿನಿಮಾ ಹೊಂದಿದೆ ಎಂಬುದನ್ನು ಮೇಲ್ಕಂಡ ಹೇಳಿಕೆ ಸೂಚಿಸುತ್ತದೆ. ಪೂರ್ಣ ಪ್ರಮಾಣದ ಶಕ್ತಿಶಾಲಿ ಕಾರ್ಯನಿರ್ವಾಹಕವಾಗದಿದ್ದರು ತನ್ನ ಪ್ರಯತ್ನ ಮೀರಿ ಕಾರ್ಯವನ್ನು ನಿರ್ವಹಿಸುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ. ಯಾವ ರೀತಿಯಲ್ಲಿ ಸಮಸ್ಯೆಗೆ ಪರಿಹಾರ ನೀಡಬಹುದೆಂಬ ಕಲ್ಪನೆ ಸಿನಿಮಾ ಜಗತ್ತಿಗಿದೆ. ಆದ್ದರಿಂದ ಸಾಂಪ್ರದಾಯಿಕ ಹಳೆ ಚೌಕಟ್ಟುಗಳಲ್ಲಿ ನಡೆಯುತ್ತಿದ್ದ ಮನುಷ್ಯನ ಬದುಕು ಕಾಲದಿಂದ ಕಾಲಕ್ಕೆ ಬದಲಾವಣೆಗೆ ಏರ್ಪಟ್ಟಿದ್ದನ್ನು ಕಾಣುತ್ತೇವೆ. ನಮ್ಮ ಹಿಂದಿನ ಚರಿತ್ರೆಯನ್ನು ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸಿದ ಹಲವಾರು ಚಿತ್ರಗಳು ನಮ್ಮ ನಾಡಿನ ಗತ ವೈಭವವನ್ನು ಮನಕ್ಕೆ ಮೆಚ್ಚುವ ಹಾಗೆ ನಾಟಿಸುವ ಶಕ್ತಿ ಸಿನಿಮಾಕ್ಕಿದೆ. ಉದಾ: ಶ್ರೀಕೃಷ್ಣದೇವರಾಯ, ಕಿತ್ತೂರು ರಾಣಿ ಚೆನ್ನಮ್ಮ, ಸಂಗೊಳ್ಳಿರಾಯಣ್ಣದಂತಹ ಅನೇಕ ಚಿತ್ರಗಳು ನಮ್ಮ ಗತ ಇತಿಹಾಸವನ್ನು ನಮ್ಮ ಮುಂದೆ ಇಟ್ಟಾಗ ನಮ್ಮ ನಾಡಿನ ವೈಭವ ಹೋರಾಟ ಹೀಗೆಲ್ಲ ಇತ್ತಾ ಎಂಬ ರೀತಿಯಲ್ಲಿ ಸೋಜಿಗ ಪಡುತ್ತಾನೆ. ಪ್ರೇಕ್ಷಕ ಅದರೊಟ್ಟಿಗೆ ನಮ್ಮ ಸಂಸ್ಕೃತಿ, ನಾಡು, ನುಡಿಯನ್ನು ಕುರಿತು ಹೆಮ್ಮೆ ಪಡುವಲ್ಲಿ ಸಿನಿಮಾ ಸಹಕಾರಿಯಾಗುತ್ತದೆ. ಇತಿಹಾಸವೊಂದು ನಮಗಿದೆ ಎಂಬುದು ಗ್ರಂಥಗಳಲ್ಲಿ ಮಾತ್ರ ಇರುತ್ತದೆ. ಅದು ವಿದ್ಯಾವಂತರಿಗೆ ಮಾತ್ರ ಎಟುಕುತ್ತದೆ. ಸಮೂಹ ಮಾಧ್ಯಮ ಸಿನಿಮಾದಲ್ಲಿ ಅದು ಪ್ರವೇಶ ಪಟ್ಟಿದ್ದಾದರೆ ಎಲ್ಲ ವರ್ಗದ ಜನರಿಗೂ ಇತಿಹಾಸ ತಿಳಿಯುವ ಹಾಗೆ ಮಾಡುವ ಸಾಮರ್ಥ್ಯ ಸಿನಿಮಾಕ್ಕೆ ಮಾತ್ರ ಇದೆ, ಸಿನಿಮಾದ ಶಕ್ತಿ ಇದಾಗಿದೆ.

"ಕಲೆ ಸಮಸ್ಯೆಗಳಿಗೆ ಪರಿಹಾರ ಒದಗಿಸಲಾರದು ನಿಜ. ಅದು ಸಮಸ್ಯೆಗಳನ್ನು ಅರ್ಥೈಸುವ ಪ್ರಯತ್ನ ಮಾಡಬಹುದಷ್ಟೆ. ಈ ಎಲ್ಲಾ ಸಮಸ್ಯೆಗಳ ಆಳದಲ್ಲಿರುವ ಮನುಷ್ಯ ಸಂಬಂಧಗಳ ಸಿಕ್ಕನ್ನು ಬಿಡಿಸಬಹುದಷ್ಟೆ. ಮತ್ತು ಆ ಮೂಲಕ ಬದುಕಿನ ಚೆಲುವಿನ ಮೂಲವನ್ನು ಗುರುತಿಸಬಲ್ಲದು." [3] ಜಗತ್ತಿನ ಯಾವುದೇ

ಸಮಸ್ಯೆಗೆ ಪರಿಹಾರ ಎಂಬುದು ಇದ್ದೇ ಇರುತ್ತದೆ. ಕೆಲವು ಪರಿಹಾರ ಮಾಡಬಲ್ಲವು. ಕೆಲವು ಸಮಸ್ಯೆಯನ್ನು ಅರ್ಥ ಮಾಡಿಸಬಲ್ಲವು. ಅಂತಹ ಕಾರ್ಯವನ್ನು ಕಲಾ ಪ್ರಕಾರವಾದ ಚಲನಚಿತ್ರ ಮಾಧ್ಯಮ ಮಾಡುತ್ತಿದೆ. ಒಂದು ವಿಭಿನ್ನ ನೆಲೆಗಟ್ಟಿನಲ್ಲಿ ಸಮಾಜದ ಅಥವಾ ವ್ಯಕ್ತಿಯ ಸುಪ್ತ ಮನಸ್ಸಿನಲ್ಲಿರುವ ವಿಚಾರಗಳನ್ನು ಬೇರೆ ಬೇರೆ ಮಾನದಂಡಗಳಿಗೆ ಅನುಗುಣವಾಗಿ ಸಹಕಾರಿಯಾಗುವ ಕಾರ್ಯ ಮಾಡುತ್ತಿರುತ್ತದೆ. ಒಂದು ಸಮಾಜದಲ್ಲಿ ಹಲವಾರು ಸಮಸ್ಯೆಗಳಿರುತ್ತವೆ. ಅಂತಹ ಸಮಸ್ಯೆಯನ್ನು ವಿವಿಧ ರೂಪದಲ್ಲಿ ಸಿನಿಮಾ ಗುರ್ತಿಸುತ್ತದೆ. ಉದಾ: ಭ್ರಷ್ಟಾಚಾರ ಎಂಬುದು ನಮ್ಮ ಸಮಾಜದಲ್ಲಿ ಆಳವಾಗಿ ಬೇರೂರಿರುವ ಕೆಟ್ಟ ಸ್ಥಿತಿಯಾಗಿದೆ. ಇದರ ವಿರೋಧವಾಗಿ ಸಮಾಜದಲ್ಲಿ ಪ್ರಶ್ನಿಸುವ ಕೆಲಸಗಳೇ ನಡೆಯುತ್ತಿಲ್ಲ ದೃಶ್ಯಮಾಧ್ಯಮದಲ್ಲಿ ಇಂತಹ ಜವಾಬ್ದಾರಿಯುತ ಕಾರ್ಯವನ್ನು ಮಾಡಿದಾಗ ಆ ಸಮಸ್ಯೆಯನ್ನು ಜನ ಅರ್ಥ ಮಾಡಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಅದಕ್ಕೆ ಪರಿಹಾರವನ್ನು ಕೆಲವು ಸಾರಿ ಸಿನಿಮಾದಲ್ಲಿ ಕ್ರಾಂತಿಕಾರಿಯಾಗಿ ತೋರಿಸಿದರು. ಕೆಲವೊಂದು ಮೂಲಭೂತ ಪರಿಹಾರವನ್ನು ಬೇರೆ ರೀತಿಯಲ್ಲಿ ನಿರ್ವಹಿಸಲು ಕಾರ್ಯ ಮಾಡುತ್ತಿರುತ್ತದೆ. ಪ್ರೇಕ್ಷಕನಿಗೆ ಆ ಸಂದರ್ಭದಲ್ಲಿ ಹೌದು ಈ ರೀತಿಯಾದ ವ್ಯವಸ್ಥೆ ನಮ್ಮಲ್ಲಿ ಇದೆ. ಅದನ್ನು ಬದಲಾವಣೆ ಮಾಡಬೇಕಾಗಿರುವುದು ನಮ್ಮ ಜವಾಬ್ದಾರಿ ಎನ್ನುವುದನ್ನು ತಿಳಿದುಕೊಳ್ಳುತ್ತಾನೆ. ಅದರೊಟ್ಟಿಗೆ ವ್ಯವಸ್ಥೆಯಲ್ಲಿರುವ ಕ್ರಿಯೆಯನ್ನು ಪ್ರಶ್ನಿಸುವ ಮಟ್ಟಕ್ಕೆ ಆಲೋಚನೆಗೆ ಒಳಗಾಗುತ್ತಾನೆ. ಮನುಷ್ಯನನ್ನು ಆಲೋಚನೆಗೆ ಹಚ್ಚುವ ಕೆಲಸ ಸಾಹಿತ್ಯ ಮತ್ತು ಸಿನಿಮಾ ಈ ಎರಡು ಪ್ರಭಾವಿ ಮಾಧ್ಯಮಗಳು ಈ ಕಾರ್ಯ ನಿರ್ವಹಿಸುತ್ತಿವೆ. ಯು.ಆರ್.ಅನಂತಮೂರ್ತಿ ರವರ 'ಸಂಸ್ಕಾರ' ಕಾದಂಬರಿ ಸಮಾಜದಲ್ಲಿನ ಸಾಂಪ್ರದಾಯಿಕ ರೀತಿ ನೀತಿಗಳನ್ನು ಪ್ರಶ್ನೆ ಮಾಡುವ ತಾತ್ವಿಕ ಅಂಶಗಳನ್ನು ಚಿತ್ರಿಸುವ ಕಾದಂಬರಿ. ಇದು ಓದುಗ ವರ್ಗದ ಆಲೋಚನೆಗಳನ್ನು ವಿಭಿನ್ನ ರೀತಿಯಲ್ಲಿ ಬದಲಾವಣೆ ಮಾಡಲು ಸಾಧ್ಯವಾಯಿತು. ಜಡ್ಡುಗಟ್ಟಿದ ಸಾಂಪ್ರದಾಯಿಕ ವ್ಯವಸ್ಥೆಯನ್ನು ಬುಡಮೇಲು ಮಾಡಿದ ಈ ಕಾದಂಬರಿ ವಿದ್ಯಾವಂತರ ಪ್ರಗತಿಪರ ಆಲೋಚನೆಗೆ ವಿಭಿನ್ನ ನೆಲೆಯಲ್ಲಿ ದಾರಿಮಾಡಿಕೊಟ್ಟಿತು. ಇಂತಹ ಕಾದಂಬರಿ ಸಿನಿಮಾ ರೂಪವಾದಂತಹ ಸಂದರ್ಭದಲ್ಲಿ ಹೊಸ ಅಲೆಯ ಸಿನಿಮಾದ ನಾಂದಿ ಇದು ಎಂದು ಪ್ರಖ್ಯಾತವಾಯಿತು. ಸಿನಿಮಾವನ್ನು ನಿಷೇಧಿಸಬೇಕು ಎಂಬ ಪಟ್ಟನ್ನು ಪಟ್ಟಭದ್ರ ಹಿತಾಸಕ್ತಿಗಳು ಮಾಡಿದರು. ಕೊನೆಗೆ ಜಯಶೀಲವಾಗಿ ಬೇರೆ ರೀತಿಯಲ್ಲಿ ಪರಿಣಾಮಕಾರಿ ಚಿತ್ರವಾಯಿತು. ಓದುಗ ವರ್ಗಕ್ಕೆ ಸೀಮಿತವಾಗಿದ್ದ 'ಸಂಸ್ಕಾರ' ಕಾದಂಬರಿ ಸಿನಿಮಾವಾಗಿ ಬದಲಾದಾಗ ಸಮಾಜದ ಎಲ್ಲ ವರ್ಗದ ಪ್ರೇಕ್ಷಕನಿಗೂ ತಲುಪಿ ಅದರ ಸತ್ಯವನ್ನು ಅರಿಯುವಲ್ಲಿ ಸಫಲತೆ ಪಡೆಯಿತು. ಹಾಗಾಗಿ ಸಾಹಿತ್ಯ ಮತ್ತು ಸಿನಿಮಾ ಜಗತ್ತಿನಾದ್ಯಂತ ಓದುಗ ಮತ್ತು ಪ್ರೇಕ್ಷಕ ಮನಸ್ಸಿನ ಆಲೋಚನೆಗಳನ್ನು ಬೇರೆ ಬೇರೆ ರೀತಿಯಲ್ಲಿ ಬದಲಾಯಿಸಲು ಸಾಧ್ಯವಾಗುತ್ತಿದೆ. ಅದರ ಜೊತೆ ಜೊತೆಗೆ ಸಾಹಿತ್ಯವನ್ನು ಸಮಾಜದ ಎಲ್ಲ ವರ್ಗದ

ಜನರನ್ನು ತಲುಪಲು ಸಹಕಾರಿಯೂ ಆಗುತ್ತಿದೆ. ಆದ್ದರಿಂದ ಸಾಹಿತ್ಯದ ಬೆಳವಣಿಗೆ ಒಂದು ಹಂತಕ್ಕೆ ಬೆಳೆಯಲು ಸಿನಿಮಾ ಕೂಡ ಅತ್ಯಂತ ಪ್ರಾಮಾಣಿಕವಾಗಿ ನೆರವಾಗುತ್ತಿದೆ. ಅದರ ಜೊತೆಗೆ ಎರಡು ಕ್ಷೇತ್ರಗಳು ಬೆಳೆಯುತ್ತಿವೆ. ಆದ್ದರಿಂದ ಸಿನಿಮಾ ಮತ್ತು ಸಾಹಿತ್ಯದ ಸಂಬಂಧ ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ಪರಸ್ಪರ ಪೂರಕವಾಗಿ ಬೆಳೆಯಲು ಸಹಾಯವನ್ನು ಮಾಡುತ್ತಿವೆ. ಇವುಗಳ ಸಂಬಂಧ ಎನ್ನುವುದು ಅನಿಯಮಿತವಾಗಿ ಸಾಗುತ್ತಲೇ ಇರುತ್ತದೆ.

ಕಲೆ ಸಾಹಿತ್ಯಗಳು ಸಮಾಜದ ಹಿತಾಸಕ್ತಿಯನ್ನು ಕಾಯ್ದುಕೊಳ್ಳುವಲ್ಲಿ ಯಾವಾಗಲು ಅತ್ಯಂತ ಪ್ರಾಮಾಣಿಕ ಪ್ರಯತ್ನ ಮಾಡುತ್ತಲೆ ಇರುತ್ತವೆ. ಕಲೆಗೆ ಆ ರೀತಿಯ ಪ್ರಾಶಸ್ತ್ಯವು ಸಿಕ್ಕಿರುವುದರಿಂದ ಕಲೆಯ ಪ್ರಕಾರಗಳಾದ ಸಿನಿಮಾ, ಸಾಹಿತ್ಯ ಜನರಲ್ಲಿ ಅತ್ಯಂತ ಪ್ರಭಾವಶಾಲಿ ಮಾಧ್ಯಮಗಳಾಗಿ ಕ್ರಿಯಾತ್ಮಕವಾಗಿವೆ. ಪ್ರತಿಹಂತದ ಸಮಾಜದ ಗುಣಾತ್ಮಕ ಅಂಶಗಳಿಗೆ ಜಗತ್ತಿಗೆ ಅಭಿಮುಖವಾಗಿ ಸಾಹಿತ್ಯ ಕೆಲಸ ಮಾಡುತ್ತಿರುತ್ತದೆ. ಆ ನಿಟ್ಟಿನಲ್ಲಿ ಸಮಾಜದ ಮೂಲಕ ಒಂದು ಅತ್ಯಂತ ಸ್ಥಿರ ರೂಪ ಕಂಡುಕೊಳ್ಳುತ್ತಿದೆ. ಸಮಾಜದಲ್ಲಿ ಹೊಸ ಬದಲಾವಣೆಗೆ ಸಿನಿಮಾ ಅಥವಾ ಸಾಹಿತ್ಯ ಕಾರಣ ಅಥವಾ ಪ್ರಭಾವ ಬೀರಿದೆ ಎಂದರೆ ನಿಜಕ್ಕೂ ಅದು ತನ್ನ ಸಾರ್ಥಕ್ಯವನ್ನು ಪಡೆದಂತೆ ಸರಿ. ಯಾವುದೇ ವಿಚಾರವನ್ನು ಮನದಟ್ಟು ಮಾಡುವ ನಿಟ್ಟಿನಲ್ಲಿ ಸಾಹಿತ್ಯ ಮತ್ತು ಸಿನಿಮಾ ನಿರ್ವಹಿಸುತ್ತಿದೆ ಎಂದಾಗ ಅದಕ್ಕೆ ತಕ್ಕದಾದ ಮೌಲ್ಯ ನೀಡುವಲ್ಲಿ ಸಹಕಾರಿಯಾಗುತ್ತದೆ. "ಸಾಹಿತ್ಯ ಕೃತಿಯೊಂದು ತನಗೆ ತಾನೇ ಸಂಪೂರ್ಣವಾಗಿದ್ದರೆ, ಅಂತಹ ಕೃತಿಯನ್ನು ಸಿನಿಮಾ ಮಾಧ್ಯಮಕ್ಕೆ ಅಳವಡಿಸುವುದು ಅಗತ್ಯವಿಲ್ಲ. ಮಹಾನ್ ನಿರ್ದೇಶಕನೊಬ್ಬ ಆ ಕೃತಿ ಹೊಂದಿರುವ ಆಶಯಗಳ ಆಚೆಗೂ ನೋಡುವ ಸಾಧ್ಯತೆಗಳಿವೆ ಎಂದುಕೊಂಡರೆ ಮಾತ್ರ ಅಂಥದ್ದನ್ನು ಸಿನಿಮಾಕ್ಕೆ ಅಳವಡಿಸುತ್ತಾರೆ".[4] ಮಹಾಬಲೇಶ್ವರ ಕಾಟ್ರಹಳ್ಳಿರವರು ಸಿನಿಮಾ ಸಾಧ್ಯತೆಯನ್ನು ಕುರಿತು ಮೇಲಿನಂತೆ ಪ್ರಸ್ತಾಪಿಸಿದ್ದಾರೆ.

ಸಾಹಿತ್ಯ ಕೃತಿಯನ್ನು ಸಿನಿಮಾ ರೂಪಕ್ಕೆ ಒಳಪಡಿಸುವ ಸಂದರ್ಭದಲ್ಲಿ ಅತ್ಯಂತ ಪ್ರಭಾವಶಾಲಿ ಸವಾಲುಗಳನ್ನು ನಿರ್ದೇಶಕ ಎದುರಿಸಬೇಕಾಗುತ್ತದೆ. ಪ್ರತಿ ಸವಾಲನ್ನು ಸಮರ್ಪಕವಾಗಿ ಎದುರಿಸಲು ಸಾಧ್ಯವಾದಾಗಷ್ಟೆ ಸಾಹಿತ್ಯ ಕೃತಿಯ ಮೌಲ್ಯವನ್ನು ಉಳಿಸಲು ಸಾಧ್ಯವಾಗುವುದು. ಪ್ರತಿ ಸಂದರ್ಭಕ್ಕೆ ಅನುಗುಣವಾಗಿ ವಿವರಗಳನ್ನು ಕೊಡುತ್ತಾ ಹೋಗುವುದು ನಿರ್ದೇಶಕನ ಜವಾಬ್ದಾರಿಯಾಗಿರುತ್ತದೆ. ಮುಖ್ಯವಾಗಿ ನಿರ್ದೇಶಕನಿಗೆ ಸಾಹಿತ್ಯ ಕೃತಿಯನ್ನು ಸಿನಿಮಾವಾಗಿಸುವಾಗ ಎದುರಾಗುವ ಸವಾಲುಗಳು ಇಂತಿವೆ.

1. **ದೀರ್ಘವಾದ ಕಾದಂಬರಿಯನ್ನು ನಿರ್ದಿಷ್ಟ ಸಮಯಕ್ಕೆ ಒಳಪಡಿಸುವುದು.**
2. **ಗಟ್ಟಿಯಾದ ನಿರೂಪಣೆ**
3. **ಸಾಹಿತ್ಯದ ಪುನರ್ ಮೌಲ್ಯೀಕರಣ**
4. **ಸಾಹಿತ್ಯದ ಭಾಷೆಯನ್ನು ಸಿನಿಮಾ ಭಾಷೆಯಾಗಿಸಿ ಯಶಸ್ವಿಯಾಗಿಸುವುದು**
5. **ಸಿನಿಮಾ ಸಾಹಿತ್ಯ ಕೃತಿಯನ್ನು ಹೇಗೆ ಅರ್ಥೈಸುತ್ತದೆ**
6. **ಸಾಹಿತ್ಯಕ್ಕೆ ಚ್ಯುತಿಬರದ ಹಾಗೆ ನಿರ್ವಹಿಸುವುದು**
7. **ಸಾಹಿತ್ಯ ಆಧಾರಿತ ಸಿನಿಮಾವನ್ನು ಯಶಸ್ವಿಯಾಗಿಸುವುದು**

1. **ದೀರ್ಘವಾದ ಕಾದಂಬರಿಯನ್ನು ನಿರ್ದಿಷ್ಟ ಸಮಯಕ್ಕೆ ಒಳಪಡಿಸುವುದು.**

ಸಾಹಿತ್ಯ ಕೃತಿಯನ್ನು ಚಲನಚಿತ್ರ ಮಾಡುವಾಗ ಚಿತ್ರತಂಡಕ್ಕೆ ಅಥವಾ ನಿರ್ದೇಶಕರಿಗೆ ಎದುರಾಗುವ ಬಹುಮುಖ್ಯ ಸವಾಲು 'ಸಮಯ'. ಸಾಹಿತ್ಯ ಕೃತಿ ಹಲವಾರು ಸನ್ನಿವೇಶಗಳನ್ನು ವಿವರಾತ್ಮಕವಾಗಿ ಚಿತ್ರಿಸಿರುತ್ತದೆ. ಅದು ನೂರಾರು ಪುಟಗಳಷ್ಟು ದೊಡ್ಡ ಮಟ್ಟದಲ್ಲಿದ್ದ ಅಕ್ಷರ ಜ್ಞಾನವನ್ನು ಸಿನಿಮಾದ ಪರಿಧಿಗೆ ಅಂದರೆ ಚಲನಚಿತ್ರ ಭಾಷೆ, ನಿರೂಪಣೆಗೆ ಅದನ್ನು ತರುವುದು ನಿಜವಾಗಿ ಕಷ್ಟವೆನಿಸುವುದು. ಸಿನಿಮಾದ ಅವಧಿಗೆ, ಸಿನಿಮಾ ಕೇವಲ ಎರಡು ಘಂಟೆಯಿಂದ ಎರಡು ಘಂಟೆ ಮೂವತ್ತು ನಿಮಿಷಕ್ಕೆ ಸೀಮಿತವಾಗಿರುತ್ತದೆ. ಸಾಹಿತ್ಯಕ್ಕೆ ಆ ರೀತಿಯಾದ ಯಾವುದೇ ಸಮಯದ ಮಿತಿಗಳಿರುವುದಿಲ್ಲ ಅಸಾಧ್ಯ ವಿಫುಲ ಬೆಳವಣಿಗೆಯಲ್ಲಿ ಚಲಿಸಿರುತ್ತದೆ. ಅಂತಹ ಸಾಹಿತ್ಯ ಕೃತಿಯನ್ನು 2 ಅಥವಾ 3 ಘಂಟೆಯ ಅವಧಿಗೆ ಸಿನಿಮಾ ರೂಪ ಮಾಡುವುದು ಅತ್ಯಂತ ಸವಾಲಿನ ಕೆಲಸವಾಗುತ್ತದೆ. ಸಾಹಿತ್ಯ ಕೃತಿಯಲ್ಲಿನ ಯಾವುದೇ ಅಂಶ, ವಿವರ, ಸನ್ನಿವೇಶಗಳು ಅನಾವಶ್ಯಕ ಎಂದೆನಿಸುವುದಿಲ್ಲ ಎಲ್ಲವು ಒಂದಕ್ಕೊಂದು ಪೂರಕವೆ. ಅಂತಹ ಕೃತಿಯನ್ನು ಸಿನಿಮಾ ಮಾಡುವಾಗ ಅದರ ವಾಸ್ತವತೆಗೆ ಧಕ್ಕೆ ಬರದ ಹಾಗೆ ಸಿನಿಮಾ ಅವಧಿಗೆ ತರುವುದು ನಿಜಕ್ಕೂ ನಿರ್ದೇಶಕರಿಗೆ ಅದು ಸವಾಲಿನ ಕಾರ್ಯವಾಗುತ್ತದೆ.

2. **ಗಟ್ಟಿಯಾದ ಚಲನಚಿತ್ರ ನಿರೂಪಣೆ:-** ಸಾಹಿತ್ಯ ಕೃತಿಯ ರೂಪಾಂತರ ಮಾಡುವಾಗ ಎದುರಾಗುವಂತಹ ಸವಾಲಿನಲ್ಲಿ ಚಲನಚಿತ್ರದ ಗಟ್ಟಿಯಾದ ನಿರೂಪಣೆ ಕೂಡ ಮುಖ್ಯವಾಗುತ್ತದೆ. ಸಾಹಿತ್ಯ ಕೃತಿಯ ನಿರೂಪಣೆ ಅತ್ಯಂತ ಗಂಭೀರ ಮತ್ತು ಅರ್ಥವತ್ತಾಗಿ ಇದ್ದಂತಹ ಸಂದರ್ಭದಲ್ಲಿ ಅದರ ಅಳವಡಿಕೆಯ ಸಿನಿಮಾದಲ್ಲಿ ಸಾಹಿತ್ಯ ಕೃತಿಗಿಂತಲು ಗಟ್ಟಿಯಾದ ನಿರೂಪಣ ಕ್ರಮವನ್ನು ಕಟ್ಟಿಕೊಟ್ಟಾಗ ಮಾತ್ರ ಚಲನಚಿತ್ರ ಯಶಸ್ವಿಯಾಗಲು ಸಾಧ್ಯವಾಗುತ್ತದೆ. ಇಲ್ಲವಾದಲ್ಲಿ ಗಂಭೀರತೆ

ಇಲ್ಲದಿದ್ದಾಗ, ಜಾಳಾದ ನಿರೂಪಣಾ ಕ್ರಮ ಸಿನಿಮಾದಲ್ಲಿ ಬಂದಾಗ ಸಾಹಿತ್ಯ ಕೃತಿಯ ಮೌಲ್ಯವನ್ನು ಬೇರೆಯದೇ ರೀತಿಯಲ್ಲಿ ಅರ್ಥೈಸಿದಂತಾಗುತ್ತದೆ. ಸಿನಿಮಾವು ಕೂಡ ಯಶಸ್ವಿಯಾಗಲು ಸಾಧ್ಯವಿಲ್ಲ. ಕೊನೆಗೆ ಎರಡು ಮಾಧ್ಯಮಗಳಲ್ಲು ಒಂದು ವ್ಯವಸ್ಥಿತ ಸೋಲಿಗೆ ನಿರ್ದೇಶಕರು ಕಾರಣರಾಗುತ್ತಾರೆ. ಆದ್ದರಿಂದ ಸಾಹಿತ್ಯ ಕೃತಿಯನ್ನು ಸಿನಿಮಾ ಮಾಡುವಾಗ ಗಂಭೀರ ನಿರೂಪಣಾ ಕ್ರಮನ್ನು ಬಳಸಿಕೊಳ್ಳಬೇಕು. ಅದು ಸವಾಲಿನ ಕೆಲಸವಾಗಿರುತ್ತದೆ.

3. **ಸಾಹಿತ್ಯದ ಪುನರ್‌ಮೌಲ್ಯೀಕರಣ:-** ಸಾಹಿತ್ಯ ಕೃಷಿ ಆದಾಗ ಅದಕ್ಕೆ ವಿಶಿಷ್ಟವಾದ ಮೌಲ್ಯ ಇರುತ್ತದೆ. ಅಂತಹ ಕೃತಿಯನ್ನು ಸಿನಿಮಾ ಮಾಧ್ಯಮಕ್ಕೆ ಒಳಪಡಿಸಿದಾಗ ಮತ್ತೆ ಅದರ ಮೌಲ್ಯ ಹೆಚ್ಚಾಗುವ ಸಾಧ್ಯತೆ ಇದೆ. ಒಂದು ವಿಶಿಷ್ಟ ಕ್ರಮದಲ್ಲಿ ಸಾಹಿತ್ಯದ ಮೌಲ್ಯವನ್ನು ಮತ್ತಷ್ಟು ಹೆಚ್ಚಿಸಿ, ಹೊಸ ಹೊಸ ಸಾಧ್ಯತೆಗಳನ್ನು ಸೃಷ್ಟಿಸುವ ಕ್ರಿಯೆ ನಿರ್ದೇಶಕರ ಜವಾಬ್ದಾರಿಯಾಗಿರುತ್ತದೆ. ಸಾಹಿತ್ಯ ಕೃತಿ ಸಿನಿಮಾವಾದಾಗ ಅದರ ತೀಕ್ಷ್ಣತೆ ಉತ್ತಮವಾಗಲುಬಹುದು ಅಥವಾ ಕ್ಷೀಣವಾಗಬಹುದು ಎರಡು ಪ್ರಕಾರದ ಕ್ರಮಗಳನ್ನು ಸರಿಯಾದ ಕ್ರಮದಲ್ಲಿ ನಿರ್ವಹಿಸಬೇಕಾಗಿರುವ ಜರೂರು ಇರುತ್ತದೆ. ಸಿನಿಮಾದ ಮುಖಾಂತರ ಹೊಸ ಅರ್ಥಸಾಧ್ಯತೆಗಳನ್ನು ಪುನರ್ ಕಟ್ಟಿಕೊಳ್ಳಬೇಕಾಗುತ್ತದೆ. ನಿರ್ದೇಶಕರಿಗೆ ಸಾಹಿತ್ಯಕ್ಕೆ ಪುನರ್ ಮೌಲ್ಯ ಸೃಷ್ಟಿಸುವುದು ಸವಾಲಿನ ಕಾರ್ಯವಾಗಿರುತ್ತದೆ. ಸಮರ್ಥವಾಗಿ ನಿಭಾಯಿಸಿದಾಗಲೆ ಸಿನಿಮಾ ಮತ್ತು ಸಾಹಿತ್ಯಕ್ಕೆ ಮೌಲ್ಯ ಬರಲು ಸಾಧ್ಯವಾಗುತ್ತದೆ.

4. **ಸಾಹಿತ್ಯದ ಭಾಷೆಯನ್ನು ಸಿನಿಮಾ ಭಾಷೆಯಾಗಿಸಿ ಯಶಸ್ವಿಯಾಗಿಸುವುದು:-** ಚಲನಚಿತ್ರ ನಿರ್ದೇಶಕರಿಗೆ ಸಾಹಿತ್ಯದ ಭಾಷೆಯನ್ನು ತನ್ನ ಉತ್ತಮ ನಿರೂಪಣ ಶೈಲಿಯಿಂದ ಸಿನಿಮಾದ ಭಾಷೆಯಾಗಿ ಪರಿವರ್ತಿಸುವುದು ಒಂದು ಸವಾಲಿನ ಕಾರ್ಯವಾಗಿರುತ್ತದೆ. ಯಾಕೆಂದರೆ ಸಾಹಿತ್ಯದ ಭಾಷೆಯ ನಿರೂಪಣಕ್ರಮಕ್ಕೂ, ಸಿನಿಮಾ ಭಾಷೆಯ ನಿರೂಪಣಾ ಕ್ರಮಕ್ಕೂ ಅತ್ಯಂತ ದೊಡ್ಡಮಟ್ಟದ ವ್ಯತ್ಯಾಸವಿದೆ. ಅಂತರದ ಈ ಭಾಷೆಯ ಕ್ರಮವನ್ನು ಸರಿಯಾದ ಮಾನದಂಡಗಳಲ್ಲಿ ಬಳಕೆ ಮಾಡದೆ ಹೋದಲ್ಲಿ ಸಿನಿಮಾ ಮತ್ತಷ್ಟು ಕುಗ್ಗುವ ಸಾಧ್ಯತೆ ಇರುವುದರಿಂದ ಅದನ್ನು ಸಮರ್ಪಕವಾಗಿ ಭಾಷೆಯನ್ನು ಬಳಸಿಕೊಳ್ಳಬೇಕಾಗುತ್ತದೆ. ಅಂತಹ ಭಾಷೆಯನ್ನು ತನ್ನದಾಗಿಸಿಕೊಳ್ಳದ ಸಾಹಿತ್ಯ ಆಧಾರಿತ ಸಿನಿಮಾಗಳು ಎಷ್ಟೋ ಯಶಸ್ವಿಯಾಗದೇ ಸೋಲನ್ನೂ ಅನುಭವಿಸಿರುವಂತಹ ಕಹಿ ಸತ್ಯಗಳು ನಮ್ಮ ಮುಂದೆ ಇವೆ. ಹಾಗಾಗಿ ಸಾಹಿತ್ಯದ ಭಾಷೆಯನ್ನು ಸ್ವಂತವಾಗಿಸಿಕೊಂಡು ಸಿನಿಮಾ ಕಟ್ಟುವಿಕೆಯಲ್ಲಿ ನಿರ್ದೇಶಕರಿಗೆ ಸವಾಲಾಗಿ ಪರಿಣಮಿಸುತ್ತದೆ.

5. **ಸಿನಿಮಾ ಸಾಹಿತ್ಯ ಕೃತಿಯನ್ನು ಹೇಗೆ ಅರ್ಥೈಹಿಸುತ್ತದೆ:-** ಪ್ರತಿಯೊಂದು ಸಾಹಿತ್ಯದ ಆಯಾಮಗಳು ವಿಭಿನ್ನವಾಗಿರುತ್ತದೆ. ಕೃತಿಯ ಕಾಲಘಟ್ಟ ಸನ್ನಿವೇಶ, ಸ್ಥಳ, ಸಂದರ್ಭ ಇವೆಲ್ಲ ಮುಖ್ಯವಾಗಿ

ಪರಿಗಣಿತವಾಗುವುದು ಸಾಹಿತ್ಯ ಕೃತಿಯನ್ನು ಸಿನಿಮಾ ರೂಪ ಮಾಡಲು ಮುಂದಾದಗ ಓದುಗ ಕೃತಿಯನ್ನು ಸಾಹಿತ್ಯ ನೆಲೆಯಲ್ಲಿ ಸ್ವೀಕರಿಸಿ ತನ್ನದಾಗಿಸಿಕೊಂಡಿರುತ್ತಾನೆ. ನಿರ್ದೇಶಕ ಅಂತಹ ಕೃತಿಯನ್ನು ಹೊಸ ಹೊಸ ಅರ್ಥ ಸಾಧ್ಯತೆಗಳನ್ನು ಸಾಹಿತ್ಯದ ಮೌಲ್ಯ ಕುಸಿಯದಂತೆ ಆ ಕೃತಿಗೆ ಮತ್ತಷ್ಟು ಹೊಸ ಅರ್ಥಗಳನ್ನು ಸೃಷ್ಟಿಸುವುದು ಸವಾಲಿನ ಕಾರ್ಯವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಪ್ರತಿಯೊಂದು ಅಂಶವು ಸಮಾಜದ ಪ್ರೇಕ್ಷಕನಿಗೆ ಅರ್ಥವಾಗಿಸಬೇಕಾಗುತ್ತದೆ. ನಿರ್ದೇಶಕರ ತನ್ನ ಸಾಧ್ಯತೆಗಳನ್ನು ಪ್ರೇಕ್ಷಕನಾಗಿಸುವ ಕ್ರಮದಲ್ಲಿ ತೊಡಗಬೇಕಾಗುತ್ತದೆ. ಸಾಹಿತ್ಯ ಕೃತಿಯನ್ನು ಸಿನಿಮಾ ಹೇಗೆ ಅರ್ಥೈಹಿಸುತ್ತಿದೆ ಎಂಬುದು ಗಮನಾರ್ಹವಾಗುತ್ತದೆ. ಸಾಹಿತ್ಯದ ಗ್ರಹಿಕೆ ಸರಿಯಾಗಿ ಆದಾಗ ಮಾತ್ರ ಅದರ ರೂಪಾಂತರವನ್ನು ಶ್ರೇಷ್ಟವಾಗಿ ಕಟ್ಟಿಕೊಡಲು ಸಾಧ್ಯ. ಸಾಹಿತ್ಯ ಹೇಳುವ ಅಂಶಗಳನ್ನು ವಿಭಿನ್ನವಾಗಿ ಅದರ ಮೌಲ್ಯವನ್ನೇ ಮತ್ತಷ್ಟು ಜನರಿಗೆ ಮುಟ್ಟಿಸುವ ಜವಾಬ್ದಾರಿ ಮತ್ತು ಸವಾಲು ನಿರ್ದೇಶಕರಿಗಿರುತ್ತದೆ.

6. **ಸಾಹಿತ್ಯಕ್ಕೆ ಚ್ಯುತಿಬರದ ಹಾಗೆ ನಿರ್ವಹಿಸುವುದು**:- ಸಾಹಿತ್ಯ ಕೃತಿಯ ರೂಪಾಂತರ ಮಾಡುವಾಗ ನಿರ್ದೇಶಕರಿಗೆ ಇರುವ ಅತಿಮುಖ್ಯವಾದ ಸವಾಲು ಸಾಹಿತ್ಯ ಕೃತಿಯ ಮೌಲ್ಯಕ್ಕೆ ಚ್ಯುತಿ ಬರದಹಾಗೆ ಕಾಪಾಡುವುದು. ಸಾಹಿತ್ಯ ಕೃತಿಯ ಅಳವಡಿಕೆಯ ಕ್ರಮದಲ್ಲಿ ಹಲವಾರು ರೀತಿಯ ತೊಂದರೆಗಳು ಎದುರಾಗುತ್ತವೆ. ಅಂತಹ ಸವಾಲು ಸಮಸ್ಯೆಗಳನ್ನು ಮುಕ್ತವಾಗಿ ಸ್ವೀಕರಿಸಿ ಎದುರಿಸಬೇಕಾಗುತ್ತದೆ. ಆಗ ಮಾತ್ರ ಸಾಹಿತ್ಯದ ಗುರಿ ತಲುಪಲು ಸಾಧ್ಯ. ಸಾಹಿತ್ಯ ಒಳಗೊಂಡಿರುವ ಉದ್ದೇಶ, ಅರ್ಥ ವಿಶ್ಲೇಷಣೆಗಳನ್ನು ಸಿನಿಮಾದಲ್ಲು ಕೂಡ ಯಥಾವತ್ತು ಬಳಕೆ ಮಾಡದಿದ್ದರು ಅವುಗಳಿಗೆ ಧಕ್ಕೆ ಬರದ ಹಾಗೆ ಕಾಪಾಡುವುದು ಅತಿಮುಖ್ಯ ಸವಾಲಾಗಿರುತ್ತದೆ. ಅಂತಹ ಚ್ಯುತಿ ಪ್ರಕ್ರಿಯೆಗಳು ಕನ್ನಡ ಚಲನಚಿತ್ರದಲ್ಲಿ ನಡೆದಾಗ ಲೇಖಕರು ತಮ್ಮ ಕೃತಿಯ ಮೌಲ್ಯ ಹಾಳಾಯಿತು ಎಂದು ಕಿಡಿಕಾರಿದ್ದು ಇದೆ. ಪ್ರತಿ ಹೆಜ್ಜೆಯಲ್ಲು ನಿರ್ದೇಶಕರಿಗೆ ಸಾಹಿತ್ಯಕ್ಕೆ ಚ್ಯುತಿ ಬರದಹಾಗೆ ಕಾಪಾಡುವುದು ಮುಖ್ಯ ಸವಾಲಿನ ಕೆಲಸವಾಗುತ್ತದೆ.

7. **ಸಾಹಿತ್ಯ ಆಧಾರಿತ ಸಿನಿಮಾವನ್ನು ಯಶಸ್ವಿಯಾಗಿಸುವುದು**:- ಮೇಲಿನ ಸವಾಲುಗಳ ಹಾಗೆ ಅತ್ಯಂತ ಜವಾಬ್ದಾರಿಯುತ ಸವಾಲು ಸಾಹಿತ್ಯಕೃತಿಯನ್ನು ಆಧಾರಿತ ಸಿನಿಮಾವನ್ನು ಯಶಸ್ವಿ ಚಿತ್ರವನ್ನಾಗಿಸುವುದು. ಸಾಹಿತ್ಯಕ್ಕೆ ಚ್ಯುತಿ ಬರದಹಾಗೆ, ಹೊಸ ಅರ್ಥಸಾಧ್ಯತೆಗಳನ್ನು ಕಟ್ಟಿಕೊಡುವುದರ ಜೊತೆ ಜೊತೆಗೆ ಪ್ರೇಕ್ಷಕ ಚಲನಚಿತ್ರವನ್ನು ಮೆಚ್ಚುವ ಹಾಗೆ ಮಾಡುವುದು ಅತ್ಯಂತ ಸವಾಲಿನ ಕ್ರಿಯೆ. ಯಾಕೆಂದರೆ ಸಿನಿಮಾದ ಯಶಸ್ಸು ಎನ್ನುವುದು ಪ್ರೇಕ್ಷಕರ ಕೈಯಲ್ಲಿ ಇರುವುದರಿಂದ ಅವರ ಅಭಿರುಚಿಗೆ ಅನುಗುಣವಾಗಿ ಸಿನಿಮಾ ತಯಾರಾಗಬೇಕು. ಅಂದರೆ

ಪ್ರತಿಯೊಬ್ಬ ಪ್ರೇಕ್ಷಕರ ಮನಸ್ಸಿನ ಅಭಿರುಚಿಗಳು ಬೇರೆ ಬೇರೆಯಾಗಿರುತ್ತವೆ. ಆದರೆ ಸಿನಿಮಾದ ಅಭಿರುಚಿಗೆ ಪ್ರೇಕ್ಷಕ ಒಗ್ಗುವಂತೆ ಮಾಡುವುದು ನಿಜವಾದ ಸವಾಲಾಗುತ್ತದೆ. ಅಂತಹ ಕಾರ್ಯದಲ್ಲಿ ಯಶಸ್ವಿಯಾಗಬೇಕಾದಾಗ ನಿಜಕ್ಕು ನಿರ್ದೇಶಕರ ಸೃಜನಶೀಲತೆಯನ್ನು ಸಿನಿಮಾ ನಿರೀಕ್ಷಿಸುತ್ತದೆ. ಹಾಗಾಗಿ ಸೃಜನಶೀಲ ಪ್ರಕ್ರಿಯೆಯಲ್ಲಿಯೇ ಪ್ರತಿಯೊಂದು ಯಶಸ್ಸನ್ನು ಮುಟ್ಟಲು ಸಾಧ್ಯವಿದೆ. ಜೊತೆಗೆ ಸಿನಿಮಾವನ್ನು ಯಶಸ್ವಿಗೊಳಿಸಬಹುದು.

ಒಟ್ಟಾರೆಯಾಗಿ ನಿರ್ದೇಶಕನಿಗೆ ನಿಜವಾಗಿ ಸಾಹಿತ್ಯ ಕೃತಿಯನ್ನು ಸಿನಿಮಾವಾಗಿಸುವಾಗ ಅತ್ಯಂತ ಚಾಣಾಕ್ಷತನದಿಂದ ಕಾರ್ಯಪ್ರವೃತ್ತನಾಗಬೇಕಾಗುತ್ತದೆ. ಪ್ರತಿ ಹೆಜ್ಜೆಯಲ್ಲು ಎಚ್ಚರಿಕೆ ಇರಬೇಕಾಗುತ್ತದೆ. ಅಂತಹ ಸೂಕ್ಷ್ಮತೆ ಇಲ್ಲದಿದ್ದಾಗ ಖಂಡಿತ ಸಿನಿಮಾ ಸೋಲನ್ನು ಒಪ್ಪಿಕೊಳ್ಳುವುದರಲ್ಲಿ ಎರಡು ಮಾತಿಲ್ಲ. ಹಾಗಾಗಿ ಪ್ರತಿಯೊಂದು ಸಾಹಿತ್ಯಕೃತಿಯ ಸಿನಿಮಾ ರೂಪಾಂತರದ ಸಂದರ್ಭದಲ್ಲಿ ನಟ–ನಟಿ, ತಾಂತ್ರಿಕವರ್ಗ, ಸಂಗೀತ, ನಿರ್ಮಾಪಕ, ಇವರೆಲ್ಲರಿಗಿಂತ ಅತ್ಯಂತ ಮುಖ್ಯ ಸವಾಲಾಗಿ ಪರಿಣಮಿಸುವುದು ನಿರ್ದೇಶಕನಿಗೆ ಮಾತ್ರ. ಹಾಗೆಂದ ಮಾತ್ರಕ್ಕೆ ಸಿನಿಮಾ ತಂಡದ ಇತರರಿಗೆ ಜವಾಬ್ದಾರಿ ಸವಾಲುಗಳಿಲ್ಲವೇ? ಎಂಬ ಪ್ರಶ್ನೆ ಎದುರಾದಾಗ ಖಂಡಿತ ಅವರಿಗೂ ಸವಾಲಾಗಿರುತ್ತದೆ. ಅದರೆ ಅತ್ಯಂತ ದೊಡ್ಡ ಮಟ್ಟದಲ್ಲಿ ಸವಾಲುಗಳನ್ನು ಎದುರಿಸಬೇಕಾಗಿರುವವರು ನಿರ್ದೇಶಕ ಮಾತ್ರ ಎಂದಲ್ಲಿ ತಪ್ಪಾಗಲಾರದು. ಸಾಹಿತ್ಯದ ಮೌಲ್ಯವನ್ನು ಮತ್ತಷ್ಟು ಬೆಳೆಸುವ ಸಿನಿಮಾ ಕ್ಷೇತ್ರದಲ್ಲಿ ಭಿನ್ನವಾದ ರೀತಿ ಸವಾಲುಗಳು ಎದುರುಗೊಳ್ಳುವುದನ್ನು ಕಾಣುತ್ತೇವೆ. "ಸಾಹಿತ್ಯ ಕೃತಿಯೊಂದನ್ನು ಆಧರಿಸಿ ಸಿನಿಮಾ ಮಾಡಿದಾಗ ಯಾವ ನಿರ್ದೇಶಕನೂ ಪ್ರತಿ ಪುಟಕ್ಕೆ ನಿಷ್ಟನಾಗಬೇಕಿಲ್ಲ. ಸಾಹಿತ್ಯಕೃತಿಯ ಅಂತರ್ಗತ ಆಶಯ ಅರ್ಥವಾದರೆ, ಆಧಾರವಾದರೆ ಅಷ್ಟು ಸಾಕು. ಆದರೆ ಸಾಹಿತ್ಯ ಕೃತಿಯನ್ನು ಆಧರಿಸಿ ಸಿನಿಮಾ ಮಾಡುತ್ತಲೇ ಮೂಲಕೃತಿಯ ಮಾನಕ್ಕೆ ಚ್ಯುತಿ ತರುವಂತಹ ಹೇಳಿಕೆ ಕೊಡುವುದು ಹುಸಿ ಪ್ರತಿಷ್ಠೆಯ ಫಲವಾಗಬಹುದು ಅಷ್ಟೆ".[5] ಎಂಬ ಅಭಿಪ್ರಾಯವನ್ನು ಬರಗೂರು ರಾಮಚಂದ್ರಪ್ಪರವರು ಪಡುತ್ತಾರೆ. ಸಾಹಿತ್ಯ ಕೃತಿಯೊಂದನ್ನು ಚಲನಚಿತ್ರವಾಗಿಸುವಾಗ ನಿರ್ದೇಶಕನ ಮೊದಲ ಕರ್ತವ್ಯ ಸಾಹಿತ್ಯ ಕೃತಿಗೆ ಧಕ್ಕೆ ತರದೇ ಅತಿ ಜತನದಿಂದ ಕಾಪಾಡುವುದು. ಸಾಹಿತ್ಯ ಕೃತಿಯೊಂದರ ಆಶಯವನ್ನು ಪ್ರೇಕ್ಷಕನಿಗೆ ಮುಟ್ಟಿಸುವ ಸಂದರ್ಭದಲ್ಲಿ ಸಾಹಿತ್ಯದಲ್ಲಿರುವ ಅಂತರ್ಗತ ಆಶಯದ ಅರ್ಥವನ್ನು ತಲುಪವಂತೆ ಮಾಡಬೇಕು. ಅದನ್ನು ಹೊರತುಪಡಿಸಿ ಬೇರೇನೋ ಹೇಳಲು ಹೊರಟಾಗ ಸಾಹಿತ್ಯಕ್ಕೆ ಚ್ಯುತಿ ಬರುವ ಸಾಧ್ಯತೆ ಇರುತ್ತದೆ. ಅದರ ಜೊತೆಗೆ ಪುನರ್ ಸೃಷ್ಟಿಯ ಸಂದರ್ಭದಲ್ಲಿ ನಿರ್ದೇಶಕರ ಸ್ವಾತಂತ್ರ್ಯವನ್ನು ಮಿತಿಯಲ್ಲಿ ಬಳಸಿಕೊಳ್ಳಬೇಕಾಗುತ್ತದೆ. ಯಶಸ್ಸಿನ ಮಟ್ಟ ತಲುಪಿದಂತಹ ಸಂದರ್ಭದಲ್ಲಿ 'ನಾನೇ ಎಲ್ಲ' ನನ್ನಿಂದಲೇ ಸಾಧ್ಯವಾಗಿದ್ದು ಎನ್ನುವಂತಹ ಅಹಂ ಬೆಳೆಯಬಾರದು. ಆ ತರಹದ ಸಂದರ್ಭದಲ್ಲಿ ಸಾಹಿತ್ಯಕ್ಕಿರುವ ಮೌಲ್ಯವನ್ನು ಸಿನಿಮಾಕ್ಕೆ ಒಳಪಡಿಸಿ ಹೇಳಿಕೆ

ಕೊಟ್ಟಂತಹ ಸಂದರ್ಭದಲ್ಲಿ ಅದು ಬರಿ ಹುಸಿ ಪ್ರತಿಷ್ಠೆಯ ಮಾತಾಗುತ್ತದೆ. ಸಾಹಿತ್ಯದ ಲೇಖಕನ ಪ್ರತಿಭೆ ಸಿನಿಮಾದ ಮೂಲಕ ಮುಂದುವರಿಯಬೇಕಾಗುವ ಅನಿವಾರ್ಯತೆ ಇರುವುದು ಸ್ಪಷ್ಟವಾಗುತ್ತದೆ. ಸಾಹಿತ್ಯ ಕೃತಿಯೊಂದರ ರೂಪಾಂತರ ಕ್ರಿಯೆಯಾದ ಚಲನಚಿತ್ರ ಇಡಿ ಕಾರ್ಯಕ್ಷೇತ್ರವನ್ನು ವಿಭಿನ್ನ ನೆಲೆಯಲ್ಲಿ ಅರ್ಥೈಸಬಲ್ಲದು. ಸಾಹಿತ್ಯದ ಮೌಲ್ಯವನ್ನು ಮತ್ತಷ್ಟು ಹೆಚ್ಚಿಸಲುಬಹುದು ಹಾಗೆ ಕುಸಿಯಲು ಕಾರಣವಾಗಲುಬಹುದು. ಆದರೆ ಪ್ರತಿಯೊಂದು ಹೆಜ್ಜೆಯಲ್ಲು ಚಿತ್ರ ನಿರ್ದೇಶಕರಿಗೆ ಎಚ್ಚರಿಕೆ ಇರಬೇಕಾದದ್ದು ಅವಶ್ಯಕವಾಗಿರುತ್ತದೆ. ಸಾಹಿತ್ಯ ಚಟುವಟಿಕೆಯ ಪ್ರತಿಹಂತದಲ್ಲು ಸಾಮಾಜಿಕ ವಿಚಾರಗಳಿಗೆ ಅನುಗುಣವಾಗಿಯೇ ಕಾರ್ಯರೂಪಕ್ಕೆ ಒಳಗಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಸಾಹಿತ್ಯ ಕೃತಿಯ ಆಶಯಗಳನ್ನು ಪ್ರೇಕ್ಷಕರಿಗೆ ಮುಟ್ಟಿಸುವ ಭರದಲ್ಲಿ ಯಾವುದೇ ತೊಡಕಾಗದೆ ಕಾಪಾಡಬೇಕು. ಪೂರ್ಣ ಪ್ರಮಾಣದ ನಿಷ್ಟೆ ಇಲ್ಲದಿದ್ದರೂ, ಲೋಪಬರದಿರುವ ಹಾಗೆ ನೋಡಿಕೊಂಡರೆ ಸಾಕಾಗುತ್ತದೆ.

1970 ರ ದಶಕದಲ್ಲಿ ತ.ರಾ.ಸುರವರ ಮೂರು ಕಾದಂಬರಿಗಳ ಆಧಾರಿತ 'ನಾಗರಹಾವು' ಚಲನಚಿತ್ರ ಯಶಸ್ವಿಯಾದ ಸಂದರ್ಭದಲ್ಲಿ ತ.ರಾ.ಸುಬ್ಬರಾವ್‌ರವರು ಇದು ನಾಗರಹಾವಲ್ಲ 'ಕೇರೆ ಹಾವು' ಎಂದು ಕಿಡಿಕಾರಿದ್ದರು. ಅಲ್ಲಿ ಕೃತಿಯ ಚೌಕಟ್ಟುಗಳನ್ನು ಕಾದಂಬರಿಕಾರ ಬೇರೆಯ ರೀತಿಯಲ್ಲಿ ಸೃಷ್ಟಿಸಿಕೊಂಡಿದ್ದರು. ಸಿನಿಮಾ ಅದನ್ನು ಸರಿಯಾದ ಕ್ರಮದಲ್ಲಿ ನಿರ್ವಹಿಸಲು ಸಾಧ್ಯವಾಗಿಲ್ಲ ಎಂಬ ಕೊರಗು ಲೇಖಕನಿಗಿತ್ತು. ಹಾಗಾಗಿ ಯಾವುದೇ ಕ್ರಮದಲ್ಲು ಸಾಹಿತ್ಯಕೃತಿಗೆ ಧಕ್ಕೆ ಬರದ ಹಾಗೆ ಕಾಪಾಡಿಕೊಳ್ಳಬೇಕಾದ ಅನಿವಾರ್ಯತೆ ನಿರ್ದೇಶಕನದ್ದಾಗಿರುತ್ತದೆ. ಸಾಹಿತ್ಯ ಕೃತಿಯನ್ನು ಚಲನಚಿತ್ರ ಮಾಡಿ ಯಶಸ್ವಿಯಾದಂತಹ ಸಂದರ್ಭದಲ್ಲಿ ನಿರ್ದೇಶಕರೇ ಎಲ್ಲ ಯಶಸ್ಸಿಗೆ ಕಾರಣಕರ್ತರು ಎಂಬ ಅಹಂ ಬೆಳೆಸಿಕೊಂಡು ಅತೀರೇಕ ನಡವಳಿಕೆಗಳು ನಡೆದಿರುವ ಇತಿಹಾಸ ನಮ್ಮ ಕನ್ನಡ ಚಲನಚಿತ್ರ ಕ್ಷೇತ್ರದಲ್ಲಿದೆ.

ಸಾಹಿತ್ಯ ಕೃತಿಯೊಂದಕ್ಕೆ ನಾನು ಋಣಿಯೆಂದು ಹೇಳಿಕೊಳ್ಳದ ಸಂದರ್ಭಗಳು ನಮ್ಮ ಕನ್ನಡ ಚಲನಚಿತ್ರ ರಂಗದಲ್ಲಿದೆ. ಉದಾ:- 1975 ರಲ್ಲಿ ಬಿಡುಗಡೆಯಾದ 'ಶುಭಮಂಗಳ' ಚಿತ್ರ ಕಾದಂಬರಿಯಾಧಾರಿತವಾಗಿದ್ದು ಅದರ ಯಶಸ್ಸು ನಿರ್ದೇಶಕರಿಗೆ ಮಾತ್ರ ಸಲ್ಲಬೇಕೆಂದು ಪುಟ್ಟಣ್ಣ ಕಣಗಾಲ್‌ರವರು ನಾನು ಕಾದಂಬರಿಯ ಒಂದು ಹಾಳೆಯನ್ನಷ್ಟೆ ತೆಗೆದುಕೊಂಡಿದ್ದೇನೆ ಎಂದು ಹೇಳುವ ಮೂಲಕ ನಿರ್ದೇಶಕನ ಸ್ವಾತಂತ್ರ್ಯವನ್ನು ಬೇರೆಯದೆ ನೆಲೆಯಲ್ಲಿ ಸ್ಪಷ್ಟಪಡಿಸಿದರು. ಅಂತಹ ಸಂದರ್ಭದಲ್ಲಿ ಸಾಹಿತ್ಯ ಕೃತಿ ಗೌಣವಾಗುವ ಸಂದರ್ಭ ಉಂಟಾಗುತ್ತದೆ. ಅಂದರೆ ಪ್ರತಿಯೊಂದು ಅಂಶಗಳು ಬೇರೆಯದೇ ಮಾರ್ಗಗಳನ್ನು ಹಿಡಿಯುವ ಸಂದರ್ಭವಾಗಿರುತ್ತದೆ. ಹಾಗಾಗಿ ನಿರ್ದೇಶಕರು ಕೂಡ ಅತ್ಯಂತ ಋಣಿ ಎಂಬ ರೀತಿಯಲ್ಲಿ ನಡೆದುಕೊಳ್ಳಬೇಕಾಗಿಲ್ಲ ಬದಲಾಗಿ ಅದರ ಮೌಲ್ಯವನ್ನು ಕಡೆಗಣಿಸುವುದು ಅಕ್ಷಮ್ಯವಾಗುತ್ತದೆ.

ಮೊದಲು ಸಾಹಿತ್ಯ ಅನಂತರ ಸಿನಿಮಾ ಎಂಬುದು ಮರೆಯಬಾರದು. ಯಶಸ್ಸು ಎಂಬುದು ಇನ್ನೊಂದು ಹಂತ.

ಸಾಹಿತ್ಯ ಕೃತಿಯೊಂದು ಸೃಷ್ಟಿಯಾಗಿ ಅದು ಯಶಸ್ವಿಯಾಗಿ ಜನಪ್ರಿಯತೆ ಹೊಂದಿದರೆ ಅದರ ಪೂರ್ಣ ಲಾಭ ಲೇಖಕನಿಗೆ ಸಲ್ಲುತ್ತದೆ. ಅದೇ ಒಂದು ಕೃತಿ ಸಿನಿಮಾವಾಗಿ ರೂಪಾಂತರಗೊಂಡಾಗ ಹಲವಾರು ರೀತಿಯ ಯಶಸ್ಸಿನಲ್ಲಿ ತಳಮಳಗಳು ಕಾಣುತ್ತವೆ. ಯಶಸ್ಸು ಎನ್ನುವುದು ಮನುಷ್ಯನಿಗೆ ಯಾವ ರೀತಿಯಲ್ಲಿ ಸಮಸ್ಯೆಯಾಗುತ್ತದೆ ಎಂಬುದು ಕೂಡ ಮುಖ್ಯವಿಚಾರ. ಉದಾ:- ಶ್ರೀ ಕೃಷ್ಣ ಆಲನಹಳ್ಳಿಯವರ 'ಪರಸಂಗದ ಗೆಂಡೆತಿಮ್ಮ' ಕಾದಂಬರಿ ಸಿನಿಮಾವಾಗಿ ಯಶಸ್ವಿಯಾದ ನಂತರ ನಿರ್ದೇಶಕರಾದ ಮಾರುತಿ ಶಿವರಾಂರವರು ಅದರ ಸಂಪೂರ್ಣ ಯಶಸ್ಸಿನ ರೂವಾರಿ ನಾನೇ ಎಂದು ತಿಳಿದುಕೊಂಡಿದ್ದರು ಎಂಬುದನ್ನು ಲೋಕೇಶ್‌ರವರು ಈ ರೀತಿ ವಿವರಿಸುತ್ತಾರೆ. "ಒಂದು ಸಿನಿಮಾ ಎಂದರೆ ಅದು ನಿರ್ದೇಶಕನ ಹೊಣೆ ನಿಜ. ಆದರೆ ಆ ಹೊಣೆ ಹೊತ್ತ ವ್ಯಕ್ತಿ ಎಲ್ಲಿಯವರೆಗೂ ಪ್ರತಿಭಾವಂತ ಮತ್ತು ಎಷ್ಟು ವಿಷಯಗಳು ಆತನಿಗೆ ಗೊತ್ತಿರುತ್ತದೆ. ಅನ್ನೋದು ಬಹಳ ಮುಖ್ಯವಾಗುತ್ತದೆ. ಇಲ್ಲಿ ಅವರ ಸಹಾಯ ಇವರ ಸಹಾಯ, ಮತ್ತೊಬ್ಬರ ಹೇಳಿಕೆ ತೆಗೆದುಕೊಂಡು ಕಾರ್ಯನಿರ್ವಹಿಸಿ, ಸಕ್ಸಸ್ ವಿಷಯ ಬಂದಾಗ ಅವೆಲ್ಲವು ತನ್ನೊಬ್ಬನಿಂದಲೇ ಸಾಧ್ಯವಾಯಿತು ಎಂದರೆ ಅದು ತಪ್ಪಾಗುತ್ತದೆ. ಸಿನಿಮಾರಂಗದಲ್ಲಿ ಇಂಥವೇ ಪವಾಡಗಳು ಎಲ್ಲೆಯಿಲ್ಲದೆ ಸಾಗುತ್ತಿರುತ್ತದೆ. ಅದೇ ರೀತಿ ಪರಸಂಗದ ಗೆಂಡೆತಿಮ್ಮ ಚಿತ್ರದಲ್ಲೂ ಆಯ್ತು ಎನ್ನುವುದು ನನ್ನ ಗುಮಾನಿ".[6] ಸಿನಿಮಾ ಎಂದರೆ ಸಮೂಹ ಸೃಷ್ಟಿ ನಟ, ನಟಿ, ಛಾಯಾಗ್ರಾಹಕ, ಸಂಗೀತ, ಸಂಕಲನ, ತಾಂತ್ರಿಕ ವರ್ಗ ಇತ್ಯಾದಿ ಇವೆಲ್ಲವುಗಳನ್ನು ನಿಭಾಯಿಸುವ ನಿರ್ದೇಶಕ ಪ್ರಮುಖರಾಗುತ್ತಾರೆ. ಚಿತ್ರದ ಯಶಸ್ಸು ಎನ್ನುವುದನ್ನು ಹಲವಾರು ಮಾನದಂಡಗಳಲ್ಲಿ ಅಳೆಯುತ್ತಾರೆ. ಅಂತಹ ಯಶಸ್ಸನ್ನು ಪಡೆಯುವುದು ಅಷ್ಟು ಸುಲಭದ್ದಾಗಿರುವುದಿಲ್ಲ. ಅದು ಸಿಕ್ಕಿದಾಗ ಎಲ್ಲ ತನ್ನಿಂದಲೇ ಸಾಧ್ಯವಾಗಿದ್ದು ಎಂಬುದು ಸ್ವಲ್ಪ ಅತಿರೇಕವೆನಿಸಬಹುದು. ಮೇಲ್ಕಂಡ ಹೇಳಿಕೆ ಲೋಕೇಶ್‌ರವರು ಸ್ವತಃ ತಮ್ಮ ಆತ್ಮಕಥನದಲ್ಲಿ ಹೇಳಿಕೊಂಡಿರುವುದು. ಗೆಲುವು ಎಂಬುದು ಮನುಷ್ಯನ ಮನಸ್ಸಿನ ತೊಳಲಾಟಗಳನ್ನು ಹೆಚ್ಚಿಸುತ್ತದೆ ಎಂಬುದಕ್ಕೆ ಇದು ನಿದರ್ಶನವಷ್ಟೆ. ಅದರಲ್ಲೂ ಸಾಹಿತ್ಯ ಕೃತಿಯೊಂದನ್ನು ಸಿನಿಮಾ ರೂಪ ಮಾಡಿದಾಗ ಅದರ ಯಶಸ್ಸು ಒಬ್ಬರಿಗೆ ಮಾತ್ರ ಸಲ್ಲುವುದಲ್ಲ ಎಂಬುದು ಸತ್ಯ. ಇಂತಹ ಸಂದರ್ಭವನ್ನು ಎದುರಿಸಿ ನಿಭಾಯಿಸುವುದು ನಿರ್ದೇಶಕರ ಜವಾಬ್ದಾರಿ ಮತ್ತು ಸವಾಲಾಗಿರುತ್ತದೆ. ತನ್ನೊಬ್ಬನಿಂದಲೇ ಎಲ್ಲ ಎನ್ನುವ ರೀತಿಯ ಧೋರಣೆ ಬಂದಾಗ ಅದು ಯಶಸ್ಸು ಎಂಬುದನ್ನು ನಿರ್ಜೀವಗೊಳಿಸುತ್ತದೆ. ನಿರ್ದೇಶಕರಿಗೆ ಪ್ರಶಂಸೆಯ ಮಟ್ಟದಲ್ಲಿ ಹೆಚ್ಚಿನ ಪಾಲು ದೊರಕಿದರು ಅದನ್ನು ನಿಭಾಯಿಸುವುದು ಸವಾಲಿನ ಕ್ರಿಯೆಯಾಗಿರುತ್ತದೆ. ಹಾಗಾಗಿ ಸಾಹಿತ್ಯ ಕೃತಿಯ ಸಿನಿಮಾ ರೂಪಾತಂರಕ್ಕೆ ತನ್ನದೇ ರೀತಿಯ ಅತ್ಯಂತ

ಪ್ರಾಮಾಣಿಕ ನಿಷ್ಠೆ ಇರಬೇಕಾಗುತ್ತದೆ. ಕೆಲವು ಸಂದರ್ಭದಲ್ಲಿ ಸಾಹಿತ್ಯ ಕೃತಿ ಸಿನಿಮಾವಾಗಿ ಯಶಸ್ವಿಯಾದಂತಹ ಸಂದರ್ಭಗಳಲ್ಲಿ ಲೇಖಕರಿಗೆ ನಿಜವಾದ ಪ್ರಶಂಸೆ ಸಲ್ಲಬೇಕು ಎಂಬ ಭಾವನೆ ಕೃತಿಕಾರರಲ್ಲು ಬರುವುದುಂಟು. 70 ರ ದಶಕದಲ್ಲಿ ಪುಟ್ಟಣ್ಣ ಕಣಗಾಲ್‌ರು ನಿರ್ದೇಶಿಸಿದ 'ಗೆಜ್ಜೆಪೂಜೆ' ಚಿತ್ರಕ್ಕೆ ರಾಷ್ಟ್ರಪ್ರಶಸ್ತಿ ದೊರಕಿದಂತಹ ಸಂದರ್ಭದಲ್ಲಿ ಎಂ.ಕೆ. ಇಂದಿರಾರವರು ಇದು ನನ್ನ ಕತೆಯ ಪಡಿಯಚ್ಚಾಗಿರುವುದರಿಂದ ತಮ್ಮ ಕತೆಗೆ ಪ್ರಶಸ್ತಿ ಬರಬೇಕಾಗಿತ್ತು ಎಂದು ಕೋಪಗೊಂಡು ಹೇಳಿಕೆ ಕೊಟ್ಟಿದ್ದನ್ನು ನಾವು ಇತಿಹಾಸದಲ್ಲಿ ಕಂಡಿದ್ದೇವೆ. ಹಾಗಾಗಿ ಇವೆಲ್ಲವೂ ಕೂಡ ಸಾಹಿತ್ಯ ಕೃತಿಯನ್ನು ಸಿನಿಮಾವಾಗಿಸುವಾಗ ಎದುರಾಗುವ ದೊಡ್ಡ ಸವಾಲುಗಳಾಗಿರುತ್ತವೆ. ಅಂತಹ ಸವಾಲುಗಳನ್ನು ಅತ್ಯಂತ ಜಾಗ್ರತೆಯಿಂದ ನಿರ್ವಹಿಸಬೇಕಾದ ಅನಿವಾರ್ಯತೆಯು ಕಂಡುಬರುತ್ತದೆ. ಹಾಗಾಗಿ ಪ್ರತಿ ಹಂತದಲ್ಲು ಬಹುಮುಖ್ಯ ಸವಾಲುಗಳು ಎದುರಾಗುತ್ತಲೆ ಇರುತ್ತವೆ. ಅವನ್ನು ಸಮರ್ಪಕವಾಗಿ ಎದುರಿಸುವ ಅನಿವಾರ್ಯತೆಯನ್ನು ಹೇಗೆ ನಿರ್ದೇಶಕ ನಿಭಾಯಿಸುತ್ತಾನೆ ಎಂಬುದೇ ಬಹುಮುಖ್ಯ ಅಂಶವಾಗುತ್ತದೆ.

### 3.2 ಸಾಹಿತ್ಯಕೃತಿ ಆಧಾರಿತ ಚಲನಚಿತ್ರ ಮಾಡುವಾಗ ಇರುವ ಸಾಧ್ಯತೆಗಳು

ಗಿರೀಶ್ ಕಾಸರವಳ್ಳಿಯವರು ಸಾಹಿತ್ಯ ಆಧಾರಿತ ಸಿನಿಮಾವನ್ನು ಯಾವ ನೆಲೆಯಲ್ಲಿ ಅರ್ಥೈಸಿಕೊಳ್ಳಬೇಕು ಎಂಬುದನ್ನು ಈ ರೀತಿ ಹೇಳುತ್ತಾರೆ. "ಸಾಹಿತ್ಯ ಮತ್ತು ಸಿನಿಮಾವನ್ನು ಸೃಷ್ಟಿ ಮರು ಸೃಷ್ಟಿ ಎಂದೇ ನೋಡಬೇಕು. ಒಂದು ಮಾಧ್ಯಮದಲ್ಲಿ ಆಗಿರುವ ಸೃಷ್ಟಿ ಇನ್ನೊಂದು ಮಾಧ್ಯಮದಲ್ಲಿ ಮರುಸೃಷ್ಟಿಯಾಗಿರುತ್ತದೆ. ಸಾಹಿತ್ಯಕೃತಿಯನ್ನು ಸಿನಿಮಾ ಮಾಡಲು ಕೈಗೆತ್ತಿಕೊಂಡಾಗ ಅದನ್ನು ದೃಶ್ಯ ಮಾಧ್ಯಮಕ್ಕೆ ಮಾಡುವ ಅನುವಾದ ಎಂದು ಭಾವಿಸುವುದು ತಪ್ಪು ಏಕೆಂದರೆ ಅದು ಮರುಸೃಷ್ಟಿ. ತೀರಾ ಆಸಕ್ತಿದಾಯಕ ಹಾಗೂ ಕುತೂಹಲಕಾರಿ ರೂಪಾಂತರ ಇದು. ಹೊಸ ಸೃಷ್ಟಿಯಲ್ಲಿ ಹೊಸದೃಷ್ಟಿಗಳು ಅನುರಣನಗೊಳ್ಳಬೇಕು." [7] ಸಾಹಿತ್ಯ ಕೃತಿಯನ್ನು ಸವಾಲಾಗಿ ಸ್ವೀಕರಿಸಿದ ಮೇಲೆ ನಿರ್ದೇಶಕನಿಗಿರುವ ಹೊಸ ಹೊಸ ಸಾಧ್ಯತೆಗಳನ್ನು ಈ ಹೇಳಿಕೆ ವಿವರಿಸಲು ಯತ್ನಿಸುತ್ತದೆ. ಸಾಹಿತ್ಯದ ಜೊತೆ ನಿರ್ದೇಶಕ ಅನುಕರಣೆ ಮಾಡುವುದು ತಪ್ಪು. ಬದಲಾಗಿ ಸಾಹಿತ್ಯದ ಜೊತೆ ಅನುಸಂಧಾನ ಮಾಡಿದಾಗ ಸಿನಿಮಾದ ಮೌಲ್ಯವನ್ನು ಹೆಚ್ಚಿಸಿಕೊಳ್ಳಲು ಸಾಧ್ಯ ಎಂಬ ಅಂಶವನ್ನು ತಿಳಿದುಕೊಳ್ಳಲು ಸಾಧ್ಯವಿದೆ. ಒಂದು ಕಲಾಮಾಧ್ಯಮದಲ್ಲಿ ಆಗಿರುವಂತಹದನ್ನು ಇನ್ನೊಂದು ಕ್ರಮದಲ್ಲಿ ಒಳಗು ಮಾಡಿದಾಗ ಪರಸ್ಪರ ಎರಡರ ನಡುವೆ ಸಮರ್ಪಕವಾದ ಅಂತರವನ್ನು ಕಂಡುಕೊಳ್ಳಲು ಸಾಧ್ಯವಿದೆ ಸಾಹಿತ್ಯ ಕೃತಿಯಲ್ಲಿ ಹಲವಾರು ವಿವರಗಳನ್ನು ಸನ್ನಿವೇಶ. ಸಂದರ್ಭಗಳನ್ನು ಕೃತಿಕಾರನ ವೈಯಕ್ತಿಕ ಪ್ರತಿಭೆಗೆ ಅನುಗುಣವಾಗಿ ಬೆಳೆಸಲು ಸಾಧ್ಯವಿದೆ. ಆದರೆ ಅದರ ಸಿನಿಮಾ ರೂಪವನ್ನು ಮಾಡಲು ನಿರ್ದೇಶಕರಿಗೆ ತನ್ನದೇ ರೀತಿಯ ಭಾಷೆಯ ನಿರೂಪಣ ಕ್ರಮದಲ್ಲಿ ಸನ್ನಿವೇಶ. ವಿವರಗಳನ್ನು ಸಮರ್ಪಕವಾಗಿ ಕಂಡುಕೊಳ್ಳಬಹುದು. ಒಂದು ಕಲಾಮಾಧ್ಯಮದಲ್ಲಿ ಸೃಷ್ಟಿಯಾಗಿರುವ ಸಾಹಿತ್ಯ ಸಮಾಜದ ಎಲ್ಲಾ ವರ್ಗದ ಜನತೆಗೆ ಮುಟ್ಟಿಸುವ ಕ್ರಮದಲ್ಲಿ ನಿರ್ದೇಶಕ ಯಥಾವತ್ತು ಸಾಹಿತ್ಯ ಕೃತಿಯನ್ನು ಸಿನಿಮಾವಾಗಿಸಲು ಪ್ರಯತ್ನಿಸಿದರೆ ಅಲ್ಲಿ ಎರಡು ಮಾಧ್ಯಮಗಳಿಗೂ ಧಕ್ಕೆ ಉಂಟಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ. ಅಲ್ಲಿ ನಿರ್ದೇಶಕ ಪ್ರತಿ ಸೃಷ್ಟಿಯ ಸೃಜನ ಶೀಲತೆಗೆ ಸವಾಲಾಗುತ್ತದೆ. ಅಂತಹ ಸವಾಲನ್ನು ಸಮರ್ಪಕವಾಗಿ ಎದುರಿಸಲು ಸಾಧ್ಯವಾಗುವುದು ನಿರ್ದೇಶಕರಿಗೆ ಅತ್ಯಂತ ಪ್ರಾಮಾಣಿಕ ಪ್ರತಿ ಸೃಷ್ಟಿಯ ಕ್ರಮದಲ್ಲಿ ಆಲೋಚನೆ ಮಾಡಿದಾಗ ಮಾತ್ರ ಜಯಶೀಲರಾಗಲು ಸಾಧ್ಯವಿದೆ. ಸಾಹಿತ್ಯ ಕೃತಿಯ ಮೌಲ್ಯವನ್ನು ಕಾಪಾಡಲು ಹೋಗಿ ತನ್ನ ಸಿನಿಮಾದ ಮೌಲ್ಯವನ್ನು ಕಳೆದುಕೊಳ್ಳುವ ಅಪಾಯವು ಇರುವುದರಿಂದ ಸಿನಿಮಾ ಅತ್ಯಂತ ಕುತೂಹಲಕಾರಿ ಮತ್ತು ಆಸಕ್ತಿದಾಯಕ ಕ್ರಮದಲ್ಲಿ ಕಂಡಾಗ ಹೊಸ ಹೊಸ ಸಾಧ್ಯತೆಗಳನ್ನು. ಆವಿಷ್ಕಾರಗಳನ್ನು ಕಂಡುಕೊಳ್ಳಲು

ಸಾಧ್ಯವಿದೆ. ಪ್ರತಿಯೊಂದು ಹಂತದಲ್ಲು ನಿರ್ದೇಶಕ ತನ್ನ ವೈಯಕ್ತಿಕ ಸೃಜನಶೀಲ ಕ್ರಿಯೆಯಿಂದ ಸಾಹಿತ್ಯಕೃತಿಗೆ ಸಿನಿಮಾ ರೂಪ ಮಾಡಿ ಯಶಸ್ವಿಯಾಗಬಹುದು. ಹಾಗಾಗಿ ನಿರ್ದೇಶಕ ಪ್ರತಿಹಂತದಲ್ಲು ಹೊಸದನ್ನು ಸೃಷ್ಟಿಸುವ ರೀತಿಯಲ್ಲಿ ಕಾರ್ಯನಿರ್ವಹಿಸಬೇಕು. ಹಾಗೆಂದ ಮಾತ್ರಕ್ಕೆ ಸಾಹಿತ್ಯವನ್ನು ಹೊರತುಪಡಿಸಿ ಅನಾವಶ್ಯಕ, ಅರ್ಥವಿಲ್ಲದ ಹೊಸ ಸಾಧ್ಯತೆಗಳನ್ನು ಸ್ವೀಕರಿಸುವ ಹಾಗಿಲ್ಲ ಎಂಬುದು ಕೂಡ ಮುಖ್ಯ ಅಂಶ ಗಮನದಲ್ಲಿರಬೇಕು. ನಿರ್ದೇಶಕನ ಸೃಜನಶೀಲತೆ ಗಟ್ಟಿ ನಿರೂಪಣ ಕ್ರಮವೇ ಸಾಹಿತ್ಯ ಕೃತಿಯನ್ನು ಚಲನಚಿತ್ರವಾಗಿಸಿದಾಗ ಯಶಸ್ವಿಯಾಗಲು ಕಾರಣವಾಗುತ್ತದೆ. "ಒಂದು ವಾಸ್ತವಿಕ ಪ್ರದೇಶದ ನಿರ್ದಿಷ್ಟ ಭಾಗವನ್ನು ಸಾಹಿತ್ಯದಂತೆ ಸಿನಿಮಾದಲ್ಲಿ ಚಿತ್ರಿಸುವುದಿಲ್ಲ ಎಂಬುದು ನಿಜ. ಸಾಹಿತ್ಯದಲ್ಲಿ ಆ ಪ್ರದೇಶದ ಪ್ರತಿ ವಿವರವನ್ನು ಕೊಡುತ್ತಾಹೋಗಬಹುದು. ಅಲ್ಲಿ ಚೌಕಟ್ಟೊಂದು ಅನಿವಾರ್ಯವೆನಿಸುವುದಿಲ್ಲ. ಆದರೆ ಸಿನಿಮಾದಲ್ಲಿ ಒಂದು ನಿರ್ದಿಷ್ಟ ಭಾಗ, ಫ್ರೇಮಿನ ಮಿತಿಯಲ್ಲಿ ಮಾಡಬೇಕಾಗುತ್ತದೆ. ಸಾಹಿತ್ಯದಲ್ಲಿ ಹೆಚ್ಚು ವಿವರಗಳನ್ನು ಒದಗಿಸಲು ಸಾಧ್ಯವಾದಂತೆ ಇಲ್ಲಿ ಆಗುವುದಿಲ್ಲ. ಇಲ್ಲಿ ಏನಿದ್ದರೂ ಕ್ಯಾಮರಾ ಮೂಲಕ ನೋಡುವ ಕಲಾತ್ಮಕ ಕಣ್ಣು, ಆ ಪ್ರದೇಶದ ನಿರ್ದಿಷ್ಟ ಭಾಗವನ್ನು ಮಿತಿಗೊಳಿಸಿ ಫ್ರೇಮಿನಲ್ಲಿ ತರುತ್ತದೆ. ಸಾಹಿತಿಯ ಕಣ್ಣು ಎಲ್ಲವನ್ನು ನೋಡಲು ಸಾಧ್ಯವಾದರೆ, ನಿರ್ದೇಶಕರ ಕ್ಯಾಮರಾಕಣ್ಣು ನಿರ್ದಿಷ್ಟ ಭಾಗಗಳಿಗೆ ಮಿತಿಗೊಳ್ಳುತ್ತದೆ. ಈ ಮಿತಿಯೇ ಆ ಪ್ರದೇಶದ ಚಿತ್ರಣವನ್ನು ಕಲಾತ್ಮಕಗೊಳಿಸುತ್ತದೆ. ಯಾಕೆಂದರೆ ನಿರ್ದಿಷ್ಟ ಪ್ರದೇಶವೊಂದು ಕ್ಯಾಮರಾ ಕಣ್ಣಿನಲ್ಲಿ ಸಂಯೋಜಿಸಲ್ಪಟ್ಟು ಕಲಾತ್ಮಕ ರೂಪ ಪಡೆಯುತ್ತದೆ. ಹೀಗೆ ಸಿನಿಮಾ ಫ್ರೇಮೊಂದು ಒದಗಿಸುವ ಮಿತಿ ಕಲಾತ್ಮಕತೆಗೆ ಪೂರಕವಾಗುತ್ತದೆ."[8] ಎಂಬುದು ಬರುಗೂರರ ಅನಿಸಿಕೆಯಾಗಿದೆ. ಸಾಹಿತ್ಯ ಮತ್ತು ಸಿನಿಮಾದ ವಾಸ್ತವದ ಸಂಗತಿಗಳನ್ನು ವಿವರಿಸುವ ಪ್ರಯತ್ನ ಈ ಮೇಲ್ಕಂಡ ಹೇಳಿಕೆಯದು. ಈ ಎರಡು ಕಲಾಪ್ರಕಾರಗಳಲ್ಲು ತನ್ನದೇ ಮಿತಿಯನ್ನು ಒಳಗೊಂಡಿರುತ್ತವೆ ಎಂಬುದನ್ನು ಸೂಚ್ಯವಾಗಿ ಹೇಳುತ್ತಾರೆ. ಸಾಹಿತ್ಯದಲ್ಲಿರುವ ಪ್ರತಿಯೊಂದು ವಿವರ, ಅಂಶಗಳನ್ನು ಸಿನಿಮಾ ರೂಪಕ್ಕೆ ತರಲು ಸಾಧ್ಯವಿಲ್ಲ. ಬದಲಿಗೆ ಅವಶ್ಯಕತೆಗೆ ಅನುಗುಣವಾಗಿ ನಿರ್ದೇಶಕ ಮಾರ್ಪಡಿಸಿ ಚಿತ್ರಿಸುತ್ತಾನೆ. ಅದು ಅವರ ಸಾಧ್ಯತೆಯು ಆಗಿರುತ್ತದೆ. ಉದಾ: ಸಾಹಿತ್ಯ ಕೃತಿಯಲ್ಲಿ ಒಂದು ಸೂರ್ಯೋದಯ ಚಿತ್ರಣವನ್ನು ಕೃತಿಕಾರ ಹಲವಾರು ಪದಗುಚ್ಛಗಳಿಂದ ಶಬ್ದಭಂಡಾರದಿಂದ ಹತ್ತಾರು ಪುಟಗಳಷ್ಟು ವಿವರಣೆ ನೀಡಬಹುದು. ನಿಸರ್ಗದ ಸೌಂದರ್ಯವನ್ನು ಹಾಡಿ ಹೊಗಳಬಹುದು. ಅದು ಅವರ ಪ್ರತಿಭೆಯನ್ನು ಅವಲಂಬಿಸಿರುತ್ತದೆ. ಆಧರೆ ಅದೇ ಸನ್ನಿವೇಶವನ್ನು ಸಿನಿಮಾದಲ್ಲಿ ಕೇವಲ ಕೆಲವೇ ನಿಮಿಷಗಳಲ್ಲಿ ಆ ಸಂದರ್ಭವನ್ನು ಕಟ್ಟಿಕೊಡಬಹುದು. ಕ್ಯಾಮರಾ ಕಣ್ಣಿನ ಮೂಲಕ ಸೂರ್ಯನ ಉದಯದ ಚಿತ್ರಣವನ್ನು ತೋರಿಸಿದರೆ ಅಷ್ಟಕ್ಕೆ ಅದು ಮುಗಿಯುತ್ತದೆ. ಸೂರ್ಯೋದಯದ ಚಿತ್ರಣವನ್ನು ಪ್ರೇಕ್ಷಕ ಅರ್ಥ ಮಾಡಿಕೊಂಡಿರುತ್ತಾನೆ. ಆದರೆ ಅದನ್ನು ಇನ್ನಷ್ಟು

ರಮ್ಯವಾಗಿಸಬೇಕಾದರೆ ಸೂರ್ಯೋದಯವನ್ನು ಕುರಿತು ಒಂದು ಹಾಡನ್ನು ಸಿನಿಮಾದಲ್ಲಿ ಅಳವಡಿಸಿ ಅದರ ಚಿತ್ರಣವನ್ನು ಕೊಟ್ಟರೆ ಸಮರ್ಪಕವಾದ ಸೂರ್ಯೋದಯದ ಮಿತಿಯನ್ನು ಮೀರಲು ಸಾಧ್ಯವಾಗುತ್ತದೆ. ಅಂದರೆ ಪ್ರತಿಯೊಂದನ್ನು ವಾಸ್ತವದ ನೆಲೆಯಲ್ಲಿ ಚಿತ್ರಿಸಲು ಸಾಧ್ಯವಿಲ್ಲ. ಉದಾ: ಕಾಡು ಕಾದಂಬರಿಯನ್ನು ಸಿನಿಮಾ ರೂಪವಾಗಿಸಿರುವ ಗಿರೀಶ್ ಕಾರ್ನಾಡ್‌ರವರು ಕಾದಂಬರಿಯಲ್ಲಿ ಬರುವ ಚಂದ್ರೇಗೌಡನ ಮನೆಯ ಹಸು ಗೌರಿ ಸಿಡಿಮದ್ದನ್ನು ಅಗಿದು ಬಾಯಿಯನ್ನು ಒಡೆಯಿಸಿಕೊಂಡು ಬಂದು ನೋವಿನಿಂದ ಸಾಯುವ ದೃಶ್ಯವನ್ನು ಕಾದಂಬರಿಕಾರ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಆದರೆ ಅದೇ ವಾಸ್ತವವನ್ನು ಸಿನಿಮಾದಲ್ಲಿ ತೋರಿಸಲು ಸಾಧ್ಯವಿಲ್ಲವೆಂದು ಅರಿತ ನಿರ್ದೇಶಕರು ಆ ಸಿನಿಮಾದಲ್ಲಿ ಗೌರಿ ಕಡಸಿನ ಚಿತ್ರಣವನ್ನು ನೀಡಿಲ್ಲ. ಯಾಕೆ ಎಂದು ಆಲೋಚಿಸಿದರೆ ಸಿನಿಮಾಕ್ಕೆ ಬೇಕಾದ ಅವಶ್ಯ ಅಂಶಗಳ ಕಡೆ ಗಮನ ಹರಿಸಬೇಕಾಗುತ್ತದೆ. ಅದು ಅವಶ್ಯಕವೋ ಅನಾವಶ್ಯಕವೋ ಎಂದು ತೀರ್ಮಾನಿಸುವುದು ಕಷ್ಟವಾಗುತ್ತದೆ. ಬದಲಾಗಿ ಆ ಸನ್ನಿವೇಶವನ್ನು ನಿರ್ದೇಶಕ ಕೈಬಿಡುತ್ತಾನೆ. ಮನುಷ್ಯರಾದರೆ ರಕ್ತಕಾರಿಕೊಂಡು ಒದ್ದಾಡುವ ಸ್ಥಿತಿಯನ್ನು ನಟನೆ ಮಾಡಬಹುದು. ಆದರೆ ವಾಸ್ತವದಲ್ಲಿ ಪ್ರಾಣಿಗಳಿಂದ ಆ ರೀತಿ ಮಾಡಿಸಲು ಸಾಧ್ಯವಿಲ್ಲದಿರುವುದರಿಂದ ಅಂತಹ ಸನ್ನಿವೇಶವನ್ನೇ ನಿರ್ದೇಶಕ ಕೈಬಿಟ್ಟು ಮುಂದಕ್ಕೆ ಹೋಗಿರುವುದು ಕಾಣಿಸುತ್ತದೆ. ಹಾಗಾಗಿ ಕಾದಂಬರಿಯಲ್ಲಿ ಬರುವ ಪ್ರತಿಯೊಂದು ವಾಸ್ತವವನ್ನು ಯಥಾವತ್ತಾಗಿ ಚಿತ್ರಿಸಲು ಸಾಧ್ಯವಿಲ್ಲ ಎಂಬುದು ಬಹುಮುಖ್ಯ ಅಂಶವಾಗುತ್ತದೆ. ಸಾಹಿತ್ಯದಲ್ಲಿ ಪ್ರತಿ ವಿವರವು ವಾಸ್ತವ ಪ್ರಪಂಚದಂತೆ ತೆರೆದುಕೊಳ್ಳುತ್ತದೆ. ಆದರೆ ಸಿನಿಮಾ ತನ್ನ ಇತಿ–ಮಿತಿ ಮತ್ತು ಸಾಧ್ಯತೆಗಳಿಂದಾಗಿ ವಾಸ್ತವ ಪ್ರಪಂಚವನ್ನು ಬೇರೆಯದೇ ರೀತಿಯಲ್ಲಿ ಹಿಡಿದಿಡುತ್ತದೆ. ಹಾಗೆಂದ ಕೂಡಲೆ ಸಿನಿಮಾ ನೈಜತೆಗೆ ದೂರವೆಂದು ದೂರಲು ಸಾಧ್ಯವಿಲ್ಲ. ನೈಜತೆಯನ್ನು ತನ್ನದೇ ವಿಧಾನದಲ್ಲಿ ಹಿಡಿದಿಡುವ ಸಾಧ್ಯತೆಗಳನ್ನು ಒಂದೊಂದು ಕಲೆ ಒಂದೊಂದು ರೀತಿಯಲ್ಲಿ ಸಾಧಿಸಿರುತ್ತದೆ. "ಪುಸ್ತಕ, ವೃತ್ತ ಪತ್ರಿಕೆ, ರೇಡಿಯೋ ಮುಂತಾದವು ನಮ್ಮ ಹಳೆಯ ಸಂಪರ್ಕ ಮಾಧ್ಯಮವೊಂದನ್ನು ವೈಜ್ಞಾನಿಕ, ಯಾಂತ್ರಿಕ ಸಾಧನಗಳಿಂದ ಹೆಚ್ಚು ಶಕ್ತಗೊಳಿಸಿ ವ್ಯಾಪ್ತಗೊಳಿಸಿ ಸಮೂಹ ಮಾಧ್ಯಮವಾಗಿ ಬೆಳೆದಂಥವು. ಆದರೆ ಸಿನಿಮಾ ಹೊಸದಾಗಿ ಹುಟ್ಟಿಕೊಂಡ ಭಾಷೆ ಈ ಸಂಪರ್ಕ ಮಾಧ್ಯಮ ಹುಟ್ಟುವಾಗಲೇ ವೈಜ್ಞಾನಿಕ, ಯಾಂತ್ರಿಕ, ಸಾಧನಗಳ ಕೂಸಾಗಿ ಸಮೂಹ ಮಾಧ್ಯಮವಾಗಿಯೇ ಮೈದಾಳಿದಂತಹದ್ದು"[9] ಚಲನಚಿತ್ರದ ರೂಪಾಂತರವನ್ನು ಕುರಿತು ಕೆ.ವಿ ಸುಬ್ಬಣ್ಣರವರು ಪ್ರಸ್ತಾಪಿಸುತ್ತಾರೆ. ಹಾಗಾಗಿ ಸಿನಿಮಾ ಪ್ರತಿ ವಿವರವನ್ನು ಸಾಧಿಸಲು ಸಾಧ್ಯವಾಗುವುದಿಲ್ಲ. ಕೃತಿಯ ವಾಸ್ತವತೆಯನ್ನು ಸಿನಿಮಾ ತನ್ನ ಪರಿಧಿಯೊಳಗೆ ನೈಜತೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡುತ್ತಿರುತ್ತದೆ. ಪ್ರತಿ ಹಂತದ ಸೃಷ್ಟಿಯ ಸವಾಲನ್ನು ನಿರ್ದೇಶಕ ತನ್ನ ಮಿತಿಯೊಳಗೆ ಸೃಷ್ಟಿಸಲು ಪ್ರಯತ್ನಪಡುತ್ತಾನೆ. ಪ್ರತಿ ಸಂದರ್ಭದಲ್ಲು

ಸಾಹಿತ್ಯಕ್ಕೆ ಚ್ಯುತಿ ಬರದ ಹಾಗೆ ನೋಡಿಕೊಳ್ಳಲು ಪ್ರಯತ್ನಿಸಬೇಕಾಗುತ್ತದೆ. ಆದ್ದರಿಂದ ವಾಸ್ತವತೆಗಳು ಬೇರೆ ಬೇರೆ ಸಾಧ್ಯತೆಗಳೊಂದಿಗೆ ನಿರ್ವಹಿಸುವಂತಹ ಸಂದರ್ಭ ನಿರ್ಮಾಣ ಮಾಡಿಕೊಳ್ಳಲು ಸಾಧ್ಯ.

ಸಾಹಿತ್ಯ ದೃಶ್ಯಮಾಧ್ಯಮದ ಚಲನಚಿತ್ರ ರೂಪದಲ್ಲಿ ನಮ್ಮಲ್ಲಿ ಬಂದಾಗ ಸುಸಂಸ್ಕೃತ ಹಾಗು ಜನಪರ ಕಾಳಜಿಯುಳ್ಳ ನಿರ್ದೇಶಕರು ಸಿಕ್ಕಿದ್ದರಿಂದ ಅವರು ಅದನ್ನು ಸಮರ್ಪಕವಾಗಿ, ವಿವೇಕ ಶೀಲರಾಗಿ ಬಳಸಿದರು. ಉತ್ತಮ ಚಿತ್ರಗಳನ್ನು ನಿರ್ಮಾಣಮಾಡಿ, ಆ ಮೂಲಕ ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಸಮಾನತೆ ಮುಂತಾದ ಹೊಸ ಮೌಲ್ಯಗಳನ್ನು ಎತ್ತಿಹಿಡಿದು ಜನತೆಯನ್ನು ತಿದ್ದಲು ಪ್ರಯತ್ನಿಸಿದರು. ಹಾಗೆಂದು ಅದರ ಮನರಂಜನೆಯ ಮೌಲ್ಯಗಳನ್ನು ಕಡೆಗಣಿಸಲಿಲ್ಲ. ಉತ್ತಮ ಸಂಗೀತ ಸುಸಂಸ್ಕೃತ ಹಾಸ್ಯ, ಸಂಭಾಷಣೆಗಳ ಮೂಲಕ ಅಭಿರುಚಿಯನ್ನು ಬೆಳೆಸಿದರು. ಸೃಜನಶೀಲ ನಿರ್ದೇಶಕರೊಬ್ಬ ಸಿನಿಮಾವನ್ನು ಸೃಷ್ಟಿಸುವ ಸಂದರ್ಭದಲ್ಲಿ ಯಾವ ರೀತಿಯ ಕಲ್ಪನೆಗಳಿಗೆ ಅನುಗುಣವಾಗಿ ಚಿತ್ರ ರೂಪಿಸುತ್ತಿದ್ದರು ಎಂಬುದು ವಿಶಿಷ್ಟವಾಗಿರುತ್ತದೆ. ದೃಶ್ಯಮಾಧ್ಯಮದ ಶಕ್ತಿ ಎಂಬುದೇ ಹಾಗೆ, ನಿರ್ದೇಶಕರ ಬುದ್ಧಿವಂತಿಕೆಯಲ್ಲಿ ಅಡಗಿರುತ್ತದೆ. ಸಾಹಿತ್ಯದೊಂದಿಗಿನ ಸಮನ್ವಯತೆಯನ್ನು ಕಾಪಾಡಿಕೊಂಡು ಸಿನಿಮಾಕ್ಕೆ ಬೇಕಾದ ವಸ್ತುವನ್ನು ಪೂರ್ಣ ಪ್ರಮಾಣದಲ್ಲಿ ನಿರ್ಮಿಸಿಕೊಳ್ಳುವುದು ಅತ್ಯಂತ ಪ್ರಭಾವಶಾಲಿಯಾಗಿರುತ್ತದೆ. ಸಾಮಾಜಿಕ ಕಳಕಳಿಯ ಜೊತೆಗೆ ನಿರ್ದೇಶಕರ ಜವಾಬ್ದಾರಿಯನ್ನು ಚಿತ್ರಿಸುತ್ತದೆ. ಪ್ರತಿಹಂತದಲ್ಲು ಚಲನಚಿತ್ರದ ಮೌಲ್ಯಗಳನ್ನು ಸಾಹಿತ್ಯದ ಅವಲಂಬಿಕೆಯಲ್ಲಿ ಚರ್ಚಿಸುವಾಗ ಯಾವುದೇ ಕ್ರಮಕ್ಕೂ ಮೌಲ್ಯಗಳನ್ನು ಹಾಳಾಗದಂತೆ ಕಾಪಾಡುವುದು ಅವಶ್ಯಕವಾಗಿರುತ್ತದೆ. ಯಾವುದನ್ನೋ ವಿಜೃಂಭಿಸುವ ಭರದಲ್ಲಿ ಏನನ್ನೋ ಸೇರಿಸುವ ಆತುರದಲ್ಲಿ ಸಾಹಿತ್ಯಕ್ಕೆ ಧಕ್ಕೆ ಬರದ ಹಾಗೆ ಕಾರ್ಯನಿರ್ವಹಿಸಬೇಕು. ಹಿತಮಿತವನ್ನು ಕಾಪಾಡಿಕೊಂಡು ಕಾರ್ಯಪ್ರವೃತ್ತರಾಗಬೇಕಾಗುತ್ತದೆ. ಸಾಮಾಜಿಕ ಕಳಕಳಿಯನ್ನು ಹೊಂದಿದ್ದರು. ಸಿನಿಮಾದ ಭಾಷೆಯನ್ನು ಮರೆಯಬಾರದು.

ಸಿನಿಮಾದ ಮನರಂಜನೆಯನ್ನು ಮಿತಿಯಲ್ಲಿ ನಿರ್ವಹಿಸಬೇಕಾಗುತ್ತದೆ ಎಂದು ಗುರ್ತಿಸುತ್ತಾರೆ. ಸುಸಂಸ್ಕೃತ ಹಾಸ್ಯ, ಸಂಭಾಷಣೆಗಳು ಪ್ರೇಕ್ಷಕನಲ್ಲಿ ಪರಿಣಾಮಕಾರಿಯಾಗಿ ಪ್ರವಹಿಸುವಂತೆ ಮಾಡುವ ಸಾಧ್ಯತೆ ಸಿನಿಮಾ ಕ್ಷೇತ್ರಕ್ಕಿದೆ. ಸಾಹಿತ್ಯಕೃತಿಯನ್ನು ಸಿನಿಮವಾಗಿಸುವ ಕ್ರಮ ನಿರ್ದೇಶಕನ ಸಾಧ್ಯತೆಗಳು ಎರಡು ಮಾಧ್ಯಮಗಳಲ್ಲಿ ಬಿಂಬಿತವಾಗಿರುತ್ತದೆ. ಯಾವುದೇ ರೀತಿಯ ಸೃಜನಾತ್ಮಕ ಅಂಶಗಳನ್ನು ಕಟ್ಟಿಕೊಡುವ ಸಾರ್ಥಕ್ಯ ಕ್ರಮವನ್ನು ಸಿನಿಮಾದ ಮೂಲಕ ನಿರ್ದೇಶಕರಿಗೆ ಸಾಧ್ಯವಿರುತ್ತದೆ. ಹಾಗಾಗಿ ಹೊಸ ಅನ್ವೇಷಣೆಗಳನ್ನು ಆಯಾ ಕ್ಷೇತ್ರದ ಮೂಲಕ ಕಟ್ಟಿಕೊಳ್ಳುವ ಅನಿವಾರ್ಯತೆ ಕಂಡುಬರುತ್ತದೆ. "ಸಾಹಿತ್ಯ ಕೃತಿಯೊಂದು ಸಿನಿಮಾ ಆಗುವುದನ್ನು ದೃಶ್ಯಾಂತರ ಎನ್ನಲಾಗುವುದು. ಅದು ಮಾಧ್ಯಮಾಂತರ ಇದು

ಒಂದು ಮಾಧ್ಯಮ ಇನ್ನೊಂದು ಮಾಧ್ಯಮ ಸಾವಯವ ಭಾಗವಾಗುವ ಪ್ರಕ್ರಿಯೆ"[10] ಬರಗೂರು ರಾಮಚಂದ್ರಪ್ಪ ಅವರು ಚಲನಚಿತ್ರದ ರೂಪಾಂತರವನ್ನು ಈ ರೀತಿ ವಿಶ್ಲೇಷಿಸುತ್ತಾರೆ.

ಸಾಹಿತ್ಯ ಕೃತಿಯನ್ನು ಸಿನಿಮಾ ಮಾಧ್ಯಮಕ್ಕೆ ರೂಪಾಂತರಗೊಳಸುವ ಸಂದರ್ಭದಲ್ಲಿ ಅದರ ಪೂರ್ಣ ಪ್ರಮಾಣದ ಜವಾಬ್ದಾರಿ ನಿರ್ದೇಶಕರದ್ದೇ ಆಗಿರುತ್ತದೆ. ಹಲವಾರು ಅರ್ಥ ಪೂರ್ಣ ಸಾರಾಂಶವನ್ನು ಸಾಹಿತ್ಯ ಕೃತಿಯೊಂದಿಗೆ ಅನುಸಂಧಾನ ಮಾಡಿದಾಗ ಮಾತ್ರ ಅದರ ತೀಪ್ರತೆಯನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಅದು ಯಶಸ್ವಿಯಾದಾಗ ಯಶಸ್ವಿಗೆ ಕಾರಣಕರ್ತರು ಹಲವಾರು ಜನ ಹುಟ್ಟಿಕೊಳ್ಳುತ್ತಾರೆ. ಅಕಸ್ಮಾತ್ ಆ ಸಿನಿಮಾ ಯಶಸ್ವಿಯಾಗಿಲ್ಲವಾದಾಗ ಅದರ ಹೊಣೆಯನ್ನು ನಿರ್ದೇಶಕನ ಮೇಲೆ ಹಾಕಿ ಕೈತೊಳೆದುಕೊಳ್ಳುವ ಸಾಧ್ಯತೆಗಳು ಹೆಚ್ಚಾಗಿ ಇರುವುದರಿಂದ ನಿರ್ದೇಶಕನ ಜವಾಬ್ದಾರಿ ಹೆಚ್ಚಾಗಿರುತ್ತದೆ. ಹಾಗಾಗಿ ಸಾಹಿತ್ಯ ಕೃತಿಯ ರೂಪಾಂತರದ ಸಂದರ್ಭದಲ್ಲಿ ಅತ್ಯಂತ ಪ್ರಭಾವಶಾಲಿ ಸೃಷ್ಟಿಯ ಕ್ರಿಯೆ ನಡೆಯುತ್ತಲೆ ಇರಬೇಕಾಗುತ್ತದೆ.

"ಸಿನಿಮಾ ಮಾಧ್ಯಮ ತನ್ನದೇ ಆದ ಸಾಧ್ಯತೆಗಳನ್ನು ಪಡೆದಿದೆ. ಕತೆಯೊಂದನ್ನೇ ಹೇಳುವ ಕುತೂಹಲ ಕೆರಳಸುವುದರ ಮೂಲಕವೇ ಪುಟದಿಂದ ಪುಟಕ್ಕೆ ಓದುಗನನ್ನು ಗೆಲ್ಲುತ್ತಾ ಹೋಗುವ ಕಾದಂಬರಿ ಹೇಗೆ ಕಲೆಯಾಗುವುದಿಲ್ಲವೋ ಹಾಗೆಯೇ ಚೆನ್ನಾಗಿ ಕಾಣುವ ಚಿತ್ರಗಳನ್ನು ಅಳವಡಿಸುವ ಸಿನಿಮಾ ಕಲೆಯಾಗುವುದಿಲ್ಲ. ಭಾಷೆಯ ಮೂಲಕ ವ್ಯಕ್ತವಾಗುವ ಕಾವ್ಯ, ಕತೆ, ನಾಟಕಗಳ ಜೊತೆ ಸಂಬಂಧವಿಟ್ಟುಕೊಂಡು ಸಿನಿಮಾ ಸ್ವಯಂ ಪೂರ್ಣ ಮಾಧ್ಯಮವಾಗಿರುತ್ತದೆ ಎಂಬುದನ್ನು ಮರೆಯಬಾರದು. ಸಿನಿಮಾಕ್ಕೆ ಕಥೆ ಕಾದಂಬರಿಗಳು ವಸ್ತುವಾಗಬಲ್ಲವು. ಅವು ಒಳ್ಳೆಯ ಕಥೆ ಕಾದಂಬರಿಗಳಾಗಿದ್ದಾಗ ಸಿನಿಮಾಕ್ಕೆಂದೇ ಅವನ್ನು ಲೇಖಕ ಬರೆದಾಗ ಅವು ತೀರಾ ಸಿನಿಮೀಯವಾಗಿ ಬಿಡುವ ಅಪಾಯವಿದೆ."[11] ಯು.ಆರ್. ಅನಂತಮೂರ್ತಿರವರ ಅನಿಸಿಕೆ ಆಗಿದೆ. ಸಾಹಿತ್ಯ ಮತ್ತು ಸಿನಿಮಾ ಪ್ರತಿಯೊಂದು ಸಂದರ್ಭದಲ್ಲೂ ಕಲಾತ್ಮಕ ಗುಣಗಳನ್ನು ಹೇಗೆ ಮೆಚ್ಚಿಕೊಂಡಿದೆ ಎಂಬುದನ್ನು ವಿವರಿಸುವ ಪ್ರಯತ್ನ ಅನಂತಮೂರ್ತಿ ಅವರಾದಾಗಿದೆ. ಸಿನಿಮಾ ಕ್ಷೇತ್ರಕ್ಕೆ ಕಥೆ, ಕಾದಂಬರಿಗಳನ್ನು ಬಳಕೆ ಮಾಡಿಕೊಂಡಾಗ ಉತ್ತಮ ಕೃತಿಗಳಾಗಬಲ್ಲವು. ಆದರೆ ಸಿನಿಮಾಕ್ಕೆಂದೇ ಸಾಹಿತ್ಯ ಸೃಷ್ಟಿಯಾದರೆ ಅದು ತೀರಾ ಸಿನಿಮೀಯವಾಗುತ್ತದೆ ಎಂಬ ಮಾತು ಅನಂತಮೂರ್ತಿರವರದು. ಸಾಹಿತ್ಯಕ್ಕೆ ತನ್ನದೇ ಮೌಲ್ಯ ಗುಣಗಳು ಸ್ವಪ್ರತಿಭೆಯಿಂದ ಹೊರಹೊಮ್ಮುವಂತಹದ್ದು. ಅದರ ಗುಣಲಕ್ಷಣಗಳನ್ನು ಸೃಷ್ಟಿಕ್ರಿಯೆಯಲ್ಲಿ ತೋರ್ಪಡಿಸುವಿಕೆ ಸಾಗುತ್ತಿದ್ದಾಗ ಅದಕ್ಕೊಂದು ಮೌಲ್ಯ ನಿರ್ಮಾಣ ಕ್ರಿಯೆ ಸಾಧ್ಯವಾಗುತ್ತದೆ. ಸಾಹಿತ್ಯದ ರೂಪಾಂತರದಿಂದ ಸಾಮಾಜಿಕವಾಗಿ ಅತ್ಯಂತ ಪ್ರಭಾವಶಾಲಿ ಕೃತಿಯಾಗಿ ಸಿನಿಮಾವನ್ನು ಚಿತ್ರಿಸಬಹುದು. ಕಲಾಪ್ರಕಾರಗಳಲ್ಲಿ ಒಂದಕ್ಕೊಂದು ವಿಶಿಷ್ಟ ಕ್ರಮದಲ್ಲಿ ನಡೆದಾಗ ಮಾತ್ರ ಅತ್ಯಂತ ಕಲಾತ್ಮಕವಾಗಿಸುವ

ಸಾಧ್ಯತೆ ಸಿನಿಮಾ ಕ್ಷೇತ್ರಕ್ಕೆ ಬರುತ್ತದೆ. ಸಾಹಿತ್ಯ ಮತ್ತು ಸಿನಿಮಾದ ಸಂಬಂಧದ ಜೊತೆಯಲ್ಲಿ ಕಾಣಬರುವ ಅಂಶಗಳನ್ನು ಗುರ್ತಿಸಬಹುದಾಗಿದೆ. ಯಾವುದೇ ಕ್ರಮದ ಹಂತದಲ್ಲೂ ಕೂಡ ಕಲಾಪ್ರಕಾರಗಳ ಪ್ರಖರತೆಯನ್ನು ಬೆಳಗಿಸಲು ನಿರ್ದೇಶಕನ ಶಕ್ತಿ ಸಾಧ್ಯತೆಗಳನ್ನು ಗುರ್ತಿಸುತ್ತದೆ. ಹುಣಸೂರು ಕೃಷ್ಣಮೂರ್ತಿರವರು ಸಾಹಿತ್ಯದ ಬದಲಾವಣೆಯನ್ನು ಕುರಿತು ಈ ರೀತಿ ಹೇಳುತ್ತಾರೆ. "ಸಾಹಿತ್ಯ ದಿಗ್ದರ್ಶಕನ ಅಭಿರುಚಿಗೆ, ವಿದ್ಯಾಸಂಸ್ಕೃತಿಗಳ ಮಟ್ಟಕ್ಕೆ ಸಾಹಿತ್ಯವನ್ನು ಇಳಿಸಬೇಕಾಗುತ್ತದೆ. ದಿಗ್ದರ್ಶಕ ಹೇಳಿದಂತೆ ಸಾಹಿತಿ ಕೇಳಲೇಬೇಕು. ಅವನ ಸಾಹಿತ್ಯವನ್ನು ಮಾರ್ಪಡಿಸಲೇಬೇಕು ಸಾಹಿತಿ ತನ್ನ ವೈಯಕ್ತಿಕ ಕಲ್ಪನೆಯನ್ನು, ಸೃಷ್ಟಿಯನ್ನು ಬಲಿಕೊಡಲೇ ಬೇಕು" [12]

ಸಾಹಿತ್ಯ ಕೃತಿಯೊಂದರ ಸಿನಿಮಾ ರೂಪ ಮಾಡುವಾಗ ನಿರ್ದೇಶಕರಿಗಿರುವ ಸಾಧ್ಯತೆಯನ್ನು ಈ ಹೇಳಿಕೆ ಗುರ್ತಿಸುತ್ತದೆ. ಸಾಹಿತಿಯ ತನ್ನ ವೈಯಕ್ತಿಕ ಕಲ್ಪನೆಯನ್ನು ಸಿನಿಮಾವಾಗಿಸುವಾಗ ಬಲಿಕೊಡಬೇಕಾಗುತ್ತದೆ. ಅಂದರೆ ತನ್ನ ಪಾತ್ರ ಬೆಳವಣಿಗೆ, ಸಂದರ್ಭ ಇವುಗಳಿಗೆ ಅನುಗುಣವಾಗಿ ಸಿನಿಮಾದ ಭಾಷೆ, ಕಾಲಘಟ್ಟಕ್ಕೆ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಳ್ಳಬೇಕು ಎಂಬ ಮಹತ್ವದ ವಿಚಾರ ಇದು. ಹೊಸ ಹೊಸ ಆವಿಷ್ಕಾರ ಸಂದರ್ಭದ ಸಿನಿಮಾ ತನ್ನ ಗ್ರಹಿಕೆಯ ತೀಕ್ಷ್ಣತೆಗೆ ಅನುಗುಣವಾಗಿ ಸಾಹಿತ್ಯವನ್ನು ಬದಲಾಯಿಸಿಕೊಳ್ಳುವ ಅನಿವಾರ್ಯತೆಗೆ ಒಳಗಾಗಬೇಕಾಗುತ್ತದೆ. ಇಲ್ಲವಾದಲ್ಲಿ ಸಿನಿಮಾದ ಯಶಸ್ಸಿಗೆ ತೊಡಕಾಗಬಹುದು. ಸಾಹಿತ್ಯದ ಗ್ರಹಿಕೆಯನ್ನು ಲೇಖಕ ನೋಡುವ ಕ್ರಮವೇ ಬೇರೆ. ಓದುಗ ನೋಡುವ ಕ್ರಮವೇ ಬೇರೆ, ನಿರ್ದೇಶಕ ನೋಡುವ ಕ್ರಮವೇ ಬೇರೆಯಾಗಿರುತ್ತದೆ. ಆದ್ದರಿಂದ ನಿಜವಾಗಿಯು ನಿರ್ದೇಶಕರ ಗ್ರಹಿಕೆ ಅನುಗುಣವಾಗಿ ಸಾಹಿತ್ಯ ಕೃತಿಯನ್ನು ಸಿನಿಮಾವಾಗಿ ಸಂವಾದಿಸಲು ಯತ್ನಿಸುತ್ತಾನೆ. ಹಾಗಾಗಿ ಕೆಲವು ಸಂದರ್ಭಗಳಲ್ಲಿ ಬದಲಾವಣೆ ಅತ್ಯಂತ ಮುಖ್ಯವಾಗಿರುತ್ತದೆ. ಹಾಗೆಂದ ಮಾತ್ರಕ್ಕೆ ಸಿನಿಮಾಕ್ಕಾಗಿ ಸಾಹಿತ್ಯವನ್ನು ಸಂಪೂರ್ಣವಾಗಿ ಬದಲಾವಣೆ ಒಳಪಡಿಸಬೇಕೆಂದು ಈ ಹೇಳಿಕೆ ಅರ್ಥವಲ್ಲ. ಆದರೆ ಕೆಲವು ಸಂದರ್ಭ, ಸನ್ನಿವೇಶಗಳಲ್ಲಿ ಬದಲಾವಣೆಯ ಅನಿವಾರ್ಯತೆಯನ್ನು ಅದು ತೋರಿಸುತ್ತಿದೆ. ಯಾವುದೇ ಸಂದರ್ಭದಲ್ಲು ಸ್ವಲ್ಪ ಮಟ್ಟಿಗಿನ ಬದಲಾವಣೆ ಮಾಡಿಕೊಳ್ಳಬೇಕಾಗುತ್ತದೆ. ಸಾಹಿತಿಯು ಸಿನಿಮಾದೊಂದಿಗೆ ಅನುಸಂಧಾನ ಮಾಡಿಕೊಳ್ಳಬೇಕಾಗುತ್ತದೆ. ಇಲ್ಲವಾದಲ್ಲಿ ಸಿನಿಮಾವು ಸಂಪೂರ್ಣವಾಗಿ ನಿರ್ದೇಶಕರ ಆಲೋಚನೆಯ ರೀತಿಯಲ್ಲಿ ಮೂಡಿ ಬರಲು ಸಾಧ್ಯವಿಲ್ಲ. ಹಾಗಾಗಿ ಪ್ರತಿಯೊಂದು ವಿಶಿಷ್ಟ ಗ್ರಹಿಕೆಯಲ್ಲು ಸಾಹಿತ್ಯ ಮತ್ತು ಸಿನಿಮಾದ ಸಮನ್ವಯತೆ ಕಾಯ್ದುಕೊಂಡಾಗ ಮಾತ್ರ ಎರಡು ಕ್ಷೇತ್ರಗಳಲ್ಲಿ ಯಶಸ್ಸನ್ನು ಕಾಣಲು ಸಾಧ್ಯ. ಕೆಲವು ಬದಲಾವಣೆಗಳು ಎರಡು ಕ್ಷೇತ್ರಗಳಲ್ಲಿ ಸಮರ್ಪಕವಾಗಿ ಮೂಡಿಬಂದಾಗ ಯಾವುದೇ ತೊಂದರೆಗಳಿಲ್ಲದೆ ಪರಸ್ಪರ ಬೆಳೆಯಲು ಸಾಧ್ಯವಾಗುತ್ತದೆ. ಸಾಹಿತ್ಯದ ಗ್ರಹಿಕೆ ಪ್ರೇಕ್ಷಕರ ಮನದಲ್ಲಿ ಬೆಳೆಯಲು ಅನುಕೂಲವಾಗುತ್ತದೆ. ಒಂದು ವಿಷಯವನ್ನು ಸಾಹಿತ್ಯ ಗ್ರಹಿಸುವ ಕ್ರಮಕ್ಕೂ,

ಚಲನಚಿತ್ರ ಗಮನಿಸುವ ಕ್ರಮಕ್ಕೂ ಬಹಳ ವ್ಯತ್ಯಾಸವಿರುವುದನ್ನು ಕಾಣುತ್ತೇವೆ. ಸಾಹಿತ್ಯ ಒಂದು ವಸ್ತು ವಿಷಯವನ್ನು ಬಹಳ ಸೂಕ್ಷ್ಮವಾಗಿ ಅವಲೋಕಿಸಿ ಅದನ್ನು ತನ್ನದೆ ನೆಲೆಯಲ್ಲಿ ವಿಶ್ಲೇಷಿಸುವ ಕಾರ್ಯ ಮಾಡುತ್ತದೆ. ಪ್ರತಿ ವಿವರಗಳು ಅರ್ಥಗಳು ವಿವರವಾಗಿ ಸಾಹಿತ್ಯದಲ್ಲಿ ರಚನೆಗೊಂಡಿರುತ್ತವೆ. ಕೃತಿಕಾರ ತನ್ನ ವೈಯಕ್ತಿಕ ಪ್ರತಿಭೆಯಿಂದ ಸಾಹಿತ್ಯವನ್ನು ಸಮೃದ್ಧತೆಯ ಮಟ್ಟಕ್ಕೆ ಕೊಂಡೊಯ್ದಿರುವಂತಹ ಸಂದರ್ಭದಲ್ಲಿ ಅದಕ್ಕೆ ಭಿನ್ನ ರೀತಿಯ ಮೌಲ್ಯವನ್ನು ಸೃಷ್ಟಿಸಿಕೊಂಡಿರುತ್ತಾನೆ. ಅಂತಹ ಸಾಹಿತ್ಯವನ್ನು ಸಿನಿಮಾ ರೂಪ ಮಾಡಿದಾಗ ಬದಲಾವಣೆಗಳಿಗೆ ಒಳಪಡಿಸಬೇಕು ಎನ್ನುವ ಸಂದರ್ಭದಲ್ಲಿ ಖಂಡಿತ ಅವನಿಗೆ ನೋವು ಉಂಟಾಗುತ್ತದೆ. ಆದರೆ ಚಲನಚಿತ್ರದ ಪರಿಭಾಷೆಗೆ ಸಾಹಿತ್ಯವನ್ನು ಬದಲುಮಾಡಿಕೊಂಡ ಸಂದರ್ಭದಲ್ಲಿ ಹಲವಾರು ವೈರುಧ್ಯಗಳಿಗೆ ಒಳಗಾದ ಸಂದರ್ಭದಲ್ಲಿ ಸಾಹಿತಿಗೆ ತಾನು ನಿರ್ವಹಿಸಿ, ಸಾಹಿತ್ಯ ಮೌಲ್ಯ ಕುಸಿಯುತ್ತಿದೆ ಎಂದೆನಿಸಿದರೆ ಯಾವುದೇ ರೀತಿಯಲ್ಲು ಅದು ನಿರ್ದೇಶಕನ ತಪ್ಪಾಗಲಾರದು. ಸಿನಿಮಾ ಪ್ರಕಾರಕ್ಕಿರುವ ಸಾಧ್ಯತೆಗಳನ್ನು ನಿರ್ದೇಶಕ ತನ್ನ ಕಲ್ಪನೆಗೆ ಅನುಗುಣವಾಗಿ ರೂಪಿಸುವ ಸ್ವಾತಂತ್ರ್ಯ ಪಡೆದಿರುತ್ತಾನೆ. ತನ್ನ ಕಲ್ಪನೆಗೆ ಅನುಗುಣವಾಗಿ ಚಿತ್ರವನ್ನು ಸೃಷ್ಟಿಸಿಕೊಳ್ಳುವಲ್ಲಿ ಬದಲಾವಣೆಗಳು ಅನಿವಾರ್ಯ ಎನ್ನುವ ಪ್ರಸಂಗದಲ್ಲಿ ಸಾಹಿತಿ ತನ್ನ ವೈಯಕ್ತಿಕ ಕಲ್ಪನೆಯ ಸಾಹಿತ್ಯವನ್ನು ಬಲಿ ಕೊಡಬೇಕು. ಅದು ವಿಪರೀತ ಎನ್ನುವಷ್ಟರ ಮಟ್ಟಿಗಲ್ಲದಿದ್ದರೂ ಸ್ವಲ್ಪ ಪ್ರಮಾಣಕ್ಕಾದರೂ ಸರಿ. ಒಂದು ಕಲಾ ಪ್ರಕಾರ ಇನ್ನೊಂದು ಕಲೆಯ ಮುಖಾಂತರ ಸಾಮಾಜಿಕ ಕ್ಷೇತ್ರಕ್ಕೆ ಬರುವ ಸಮಯದಲ್ಲಿ ಪರಸ್ಪರ ಒಬ್ಬರಿಗೊಬ್ಬರು ಬದಲಾವಣೆಗಳಿಗೆ ಸ್ಪಂದಿಸಬೇಕಾದ ಅವಶ್ಯಕತೆ ಕಾಣುತ್ತದೆ. ಈ ರೀತಿಯ ಮಾರ್ಪಾಡುವಿಕೆ ಸಾಧ್ಯವಾಗದಿದ್ದಲ್ಲಿ ಎರಡು ಕ್ಷೇತ್ರಗಳಲ್ಲಿನ ಸಂಪೂರ್ಣ ಬೆಳವಣಿಗೆ ಕುಂಠಿತಗೊಳ್ಳುತ್ತದೆ. ಒಂದು ಪಡೆದುಕೊಳ್ಳಲು ಇನ್ನೊಂದು ಕಳೆದುಕೊಳ್ಳಬೇಕೆನ್ನುವ ಮಾತಿನ ಪ್ರಕಾರವೇ ಸಾಹಿತಿ ಮತ್ತು ಸಿನಿಮಾ ನಿರ್ದೇಶಕ ಪರಸ್ಪರ ಮಾರ್ಪಾಡುಗಳಿಗೆ ಒಳಗಾಗಲೇ ಬೇಕಾಗುವ ಅನಿವಾರ್ಯತೆ ಸೃಷ್ಟಿಯಾಗಿರುತ್ತದೆ.

## ಟಿಪ್ಪಣಿಗಳು

1. ಶ್ರಮ: ಸಂಸ್ಕೃತಿ. ಸೃಜನಶೀಲತೆ-ಬರಗೂರು ರಾಮಚಂದ್ರಪ್ಪ ಪುಟ 411

2. ಸಿನಿಮಾ – ಜಿ.ಕೆ.ರಮೇಶ್ - ಉಜ್ವಲ ಪ್ರಕಾಶನ ಮೈಸೂರು ಪುಟ 6-1986

3. ನಮ್ಮ ಚಲನಚಿತ್ರದ ವಿಷಯಗಳು ಎಷ್ಟು ಸುಸಂಬದ್ಧ?- ಡಿ.ಎಸ್.ನಾಗಭೂಷಣ್

ಸಿನಿಮಾ-ಸರ್ಕಾರ-ಸಮಾಜ

ಪ್ರಸಾರಾಂಗ- ಬೆಂ.ವಿ.ವಿ. 1983 - ಪುಟ 15

4.ಉಲ್ಲೇಖ: ಮಹಾಬಲೇಶ್ವರ ಕಾಟ್ರಹಳ್ಳಿ. ಸಾಹಿತ್ಯ ಮತ್ತು ಸಿನಿಮಾ ಪುಟ 43 – 1993

5. ಶ್ರಮ: ಸಂಸ್ಕೃತಿ. ಸೃಜನಶೀಲತೆ - ಬರಗೂರು ರಾಮಚಂದ್ರಪ್ಪ ಪುಟ-412

6. ಲೋಕೇಶ್ ಪರಸಂಗ - ನಿರೂಪಣೆ - ಸುಮಾನ ಕಿತ್ತೂರು. ಪುಟ-66 2005

7 . ಹಾಲು ಜೇನಾಗದ ಕನ್ನಡ ಸಾಹಿತ್ಯ- ಎಂ.ಕೆ.ಭಾಸ್ಕರ್ ರಾವ್ (ಗಿರೀಶ್ ಕಾಸರವಳ್ಳಿ ಹೇಳಿಕೆ ಉದ್ಧೃತ)

'ಸುಧಾ' ಯುಗಾದಿ ವಿಶೇಷಾಂಕ – 2001 - ಪುಟ 150

8. ಸಂಸ್ಕೃತಿ:ಶ್ರಮ-ಸೃಜನಶೀಲತೆ-ಬರಗೂರು ರಾಮಚಂದ್ರಪ್ಪ ಪುಟ -366 -2005

9. ಸಿನಿಮಾದ ದೂರ ಚಿತ್ರ - ಸಮೀಪ ಚಿತ್ರಗಳು - ಕೆ.ವಿ.ಸುಬ್ಬಣ್ಣ ಕೆ.ವಿ ಅಕ್ಷರ. ಪುಟ 11-1980

10. ಕನ್ನಡ ಸಾಹಿತ್ಯ ಮತ್ತು ಸಿನಿಮಾ .ಬರಗೂರು ರಾಮಚಂದ್ರಪ್ಪ . ಪುಟ 6 – 1998

11. ಪ್ರಜ್ಞೆ ಮತ್ತು ಪರಿಸರ ಯು.ಆರ್.ಅನಂತಮೂರ್ತಿ ಪುಟ 260-2004

ಕನ್ನಡ ಪುಸ್ತಕ ಪ್ರಾಧಿಕಾರ - ಬೆಂಗಳೂರು

12. ಚಲನಚಿತ್ರ ಸಾಹಿತ್ಯದ ಸಮಸ್ಯೆಗಳು – ಹುಣಸೂರು ಕೃಷ್ಣಮೂರ್ತಿ

'ಚಿನ್ನದ ಗರಿ' ಸಂಪಾದನೆ: ಹಾ.ಮಾ.ನಾಯಕ್

ಕನ್ನಡ ಅಧ್ಯಯನ ಸಂಸ್ಥೆ ಮೈಸೂರು. ವಿಶ್ವವಿದ್ಯಾಲಯ ಪುಟ-35-36 1974

## ಅಧ್ಯಾಯ-4

# ಶ್ರೀ ಕೃಷ್ಣ ಆಲನಹಳ್ಳಿಯವರ ಕಾದಂಬರಿಗಳು ಹಾಗು ಕಾದಂಬರಿಗಳನ್ನು ಆಧಾರಿತ ಚಲನಚಿತ್ರಗಳ ತೌಲನಿಕ ಅಧ್ಯಯನ

## ಅಧ್ಯಾಯ-4

# ಶ್ರೀ ಕೃಷ್ಣ ಆಲನಹಳ್ಳಿಯವರ ಕಾದಂಬರಿಗಳು ಹಾಗು ಕಾದಂಬರಿಗಳನ್ನು ಆಧಾರಿತ ಚಲನಚಿತ್ರಗಳ ತೌಲನಿಕ ಅಧ್ಯಯನ

ಒಂದು ಸಾಹಿತ್ಯ ಕೃತಿಯನ್ನು ಸಿನಿಮಾವಾಗಿಸುವಾಗ ಹಲವಾರು ಸವಾಲುಗಳೊಂದಿಗೆ ನಿರ್ದೇಶಕ ಕಾರ್ಯ ಪ್ರವೃತ್ತನಾಗುತ್ತಾನೆ. ಈ ಕ್ರಿಯೆಯಲ್ಲಿ ಸಿನಿಮಾ ಮತ್ತು ಸಾಹಿತ್ಯ ಎರಡು ಕೂಡ ಪ್ರಭಾವಶಾಲಿಯಾಗಿರುವುದರಿಂದ ಯಾವುದನ್ನೂ ನಿರ್ಲಕ್ಷಿಸುವ ಹಾಗಿಲ್ಲ. ಹಾಗಾಗಿ ಎರಡು ಮಾಧ್ಯಮಗಳಗೂ ತನ್ನದೇ ಆದಂತಹ ಮೌಲ್ಯಗಳಿರುವುದರಿಂದ ಎರಡರ ಹಿತಾಸಕ್ತಿ ಕಾಪಾಡಿಕೊಳ್ಳುವ ಅನಿವಾರ್ಯತೆ ನಿರ್ದೇಶಕನಿಗೆ ಇತ್ತು. ಕಾದಂಬರಿಯನ್ನು ಒಬ್ಬ ನಿರ್ದೇಶಕನಾಗಿ, ಓದುಗನಾಗಿ, ಕಥಾನಾಯಕನನ್ನು ಮನಸ್ಸಿನಲ್ಲಿರಿಸಿಕೊಂಡು ಓದಿರುತ್ತಾನೆ. ಪ್ರತಿಯೊಂದು ಅಂಶಗಳನ್ನು ಸಿನಿಮಾರೂಪಕ್ಕೆ ತರುವಂತಹ ಸಂದರ್ಭದಲ್ಲಿ ಅನಿವಾರ್ಯತೆಗೆ ಅನುಗುಣವಾಗಿ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾನೆ. ಶ್ರೀ ಕೃಷ್ಣ ಆಲನಹಳ್ಳಿಯವರ ಮೂರು ಕಾದಂಬರಿಗಳಾದ 'ಕಾಡು', 'ಪರಸಂಗದ ಗೆಂಡೆತಿಮ್ಮ,' 'ಭುಜಂಗಯ್ಯನ ದಶಾವತಾರಗಳು', ಸಾಹಿತ್ಯ ಕೃತಿಗಳಾಗಿ ಅತ್ಯಂತ ಜನಪ್ರಿಯತೆಯನ್ನು ಪಡೆದಿವೆ. ಅಂತಹ ಕೃತಿಗಳನ್ನು ಸಿನಿಮಾ ಮಾಧ್ಯಮಕ್ಕೆ ತರುವುದು ಸ್ವಲ್ಪ ಸವಾಲೆನಿಸಿದರೆ ತಪ್ಪಾಗಲಾರದು. ಅಂತಹ ಕ್ರಿಯಾತ್ಮಕ ಜಗತ್ತಿನಲ್ಲಿ ಹಲವು ಪ್ರಕ್ರಿಯೆಗಳಿಗೆ ನಿರ್ದೇಶಕ ಒಳಗಾಗುತ್ತಾನೆ.

"ಕಾಡು ಕಾದಂಬರಿಯು ಕಿಟ್ಟಿ ಎಂಬ ಸಣ್ಣ ಹುಡುಗನ ಮೂಲಕ ನಿರೂಪಿತವಾಗಿದೆ. ತನ್ನ ಸುತ್ತಲಿನ ಪ್ರಪಂಚದಲ್ಲಿ ನಡೆಯುವ ಕ್ರೌರ್ಯ ಕಿಟ್ಟಿಯ ಅನುಭವ ಲೋಕವನ್ನು ಪ್ರವೇಶಿಸುವ ಬಗೆ, ಇದರಿಂದಾಗಿ ಅವನ ಅರಿವಲ್ಲಿ ಮೂಡುವ ಸಮಾಜ ವ್ಯಕ್ತಿಗಳ ನಡುವಿನ ಸಂಬಂಧದ ತೊಡಕುಗಳು ಅತ್ಯಂತ ಚಿತ್ರವತ್ತಾಗಿ ನಿರುದ್ವೇಗದಿಂದ ನಿರೂಪಿತವಾಗಿದೆ"[1] "ಅಲ್ಲಿನ ಅನೈತಿಕ ಸಂಬಂಧಗಳು ಎರಡು ಹಳ್ಳಿಗಳ ಚಿತ್ರಣವನ್ನು ಬದಲು ಮಾಡುತ್ತವೆ. ಅದಕ್ಕೆಲ್ಲವೂ ಕಾರಣವಾಗುವುದು ಆಧುನಿಕತೆಯ ಸ್ಪರ್ಷವೆ ಕಾರಣ. ಒಂದು ಸಾಂಪ್ರದಾಯಿಕ ಹಳ್ಳಿಯಲ್ಲಾಗುವ ವಿಘಟನೆಯನ್ನು ಚಿತ್ರಿಸುತ್ತದೆ. ಪರಸ್ಪರ ರಾಗದ್ವೇಷಗಳಿರುವ ಎರಡು ಹಳ್ಳಿಗಳು ಎದುರು ಬದುರಾದಾಗ ಹೀಗೆ ವಿಭಿನ್ನ ರೀತಿಯಲ್ಲಿ ಚಲಿಸುತ್ತವೆ ಎಂಬುದನ್ನು ಚಿತ್ರಿಸುತ್ತಾರೆ".[2] "ನೀತಿಯ ನೆಲೆಗಟ್ಟು ಶಿಥಿಲಗೊಂಡ ಗ್ರಾಮ ಜೀವನದ ವಿಘಟನೆ ಕಾಡು

ಕಾದಂಬರಿಯ ಕೇಂದ್ರ. ಬಾಲಕನೊಬ್ಬನ ಕುತೂಹಲದ ಕಣ್ಣುಗಳ ಮೂಲಕ ನಮ್ಮ ಮುಂದೆ ಕಥೆ ಸಾಗುತ್ತದೆ. ಹಳ್ಳಿಯ ಕುಳ ಒಬ್ಬ ಪರಸ್ತ್ರಿಯೊಬ್ಬಳ ಜೊತೆ ಅಕ್ರಮ ಸಂಬಂಧ ಹೊಂದಿರುವುದರ ನ್ಯಾಯ ಪಂಚಾಯಿತಿಯಲ್ಲಿ ನೆರೆ ಹಳ್ಳಿಯ ಜನ ನ್ಯಾಯವಾದಿಗಳ ವಿರುದ್ಧ ಆರೋಪಿಯನ್ನು ಎತ್ತಿ ಕಟ್ಟುವುದರೊಂದಿಗೆ ಗ್ರಾಮದ ಒಡಕು ಆರಂಭವಾಗುತ್ತದೆ. ಹೊಸೂರಿನ ಹೆಂಗಸೊಬ್ಬಳ ಅನೈತಿಕ ಸಂಬಂಧಕ್ಕೆ ಒಳಪಟ್ಟಿರುವ ಚಂದ್ರೇಗೌಡನ ರಾಕ್ಷಸ ಪಂಚಾಯಿತಿಯಿಂದ ಹಬ್ಬುವ ದ್ವೇಷದ ಕಿಚ್ಚು ಗೌಡನ ರಾಗಿಮೆದೆಯನ್ನು ಕಬಳಿಸಿ. ಓಕುಳಿ ಜಿದ್ದಿನಾಟದಲ್ಲಿ ಪರಕಾಷ್ಠೆ ಮುಟ್ಟಿ ಕೊನೆಗೆ ಕೊಲೆ ರಕ್ತಪಾತಗಳಲ್ಲಿ, ಕಮಲಮ್ಮನ ಸಾವಿನಲ್ಲಿ ಅಂತ್ಯಗೊಳ್ಳುತ್ತದೆ. ಈ ಮಧ್ಯೆ ಸಿಡಿಮದ್ದಿನಿಂದ ಗೌರಿ ಕಡಸಿನ ಸಾವು, ಮೊಣ್ಣನ ಸಾವು, ನಾಗಿಯ ಅಜ್ಜಿಯ ಮರಣ, ಅಕ್ರಮ ಸಂಬಂಧದ ಫಲ ಹೊತ್ತ ಸಾವಿತ್ರಿಯ ಆತ್ಮಹತ್ಯೆ ಮೊದಲಾದ ದುರಂತಗಳ ಸರಣಿ ಕಾಡು ಕಾದಂಬರಿಯಲ್ಲಿ ಅಡಗಿದೆ."[3]

ಇಂತಹ ಕಥಾ ಹಂದರವಿರುವ ಕಾಡು ಕಾದಂಬರಿಯನ್ನು ತೆರೆಗೆ ತರುವಲ್ಲಿ ಗಿರೀಶ್ ಕಾರ್ನಾಡ್‌ರು ಅತ್ಯಂತ ಪ್ರಾಮಾಣಿಕವಾದ ಪ್ರಯತ್ನದಲ್ಲಿ ಜಯಶೀಲರಾಗಿದ್ದಾರೆ. ಯಾವುದೇ ರೀತಿಯ ಗೊಂದಲಗಳಿಲ್ಲದ ಅತ್ಯುತ್ತಮ ಚಿತ್ರ 'ಕಾಡು' ಎಂದರೆ ತಪ್ಪಾಗಲಾರದು. ಕಾದಂಬರಿಯ ಹಲವಾರು ಮೂಲಭೂತ ಸನ್ನಿವೇಶಗಳನ್ನು ಕಟ್ಟಿಕೊಟ್ಟಿದ್ದಾರೆ. ಪ್ರತಿಯೊಂದಕ್ಕೂ ಸಂಬಂಧವನ್ನು ಏರ್ಪಡಿಸುವ ಕೊಂಡಿಯಾಗಿ ಸಿನಿಮಾ ರೂಪಗೊಂಡಿದೆ. ಚಲನಚಿತ್ರದ ಬಹುಮುಖ್ಯ ಆಕರ್ಷಣೆ ನಿರೂಪಣೆ. ಚಿತ್ರದುದ್ದಕ್ಕೂ ಸಿನಿಮಾದ ಗಟ್ಟಿಯಾದ ನಿರೂಪಣ ಕ್ರಮದಿಂದ ಚಿತ್ರಕ್ಕೆ ಒಂದು ಅನನ್ಯತೆಯನ್ನು ತುಂಬಿಸುತ್ತದೆ.

ಕಾದಂಬರಿಯ ಮೊದಲ ಅಧ್ಯಾಯದ ಆರಂಭದಲ್ಲಿ ಹಬ್ಬದ ತಯಾರಿ ಸಡಗರ ಸಂಭ್ರಮಗಳನ್ನು ಕಟ್ಟಿಕೊಡುತ್ತಾರೆ. ಕಿಟ್ಟಿ ತನ್ನ ಮಾವ ಕೊಡಿಸಿದ ಪಟಾಕಿಗಳನ್ನು ಉತ್ಸಾಹದಿಂದ ಒಡೆಯುತ್ತಿರುತ್ತಾನೆ. ಸಿನಿಮಾದಲ್ಲಿ ಚಂದ್ರೇಗೌಡ ತಾನು ಒಳಗೊಂಡಿರುವ ಅನೈತಿಕ ಸಂಬಂಧದ ಹೆಣ್ಣನ್ನು ನೋಡಲು ಹೊರಡುವ ಚಿತ್ರಣ ಹಾಗೂ ಜಿರಕಿಜೋಡುಗಳನ್ನು ತೋರಿಸುವುದರ ಮುಖಾಂತರ ಆರಂಭವಾಗುತ್ತದೆ. ತನ್ನ ಮನದ ಕುದಿತನವನ್ನು ಯಾರಲ್ಲೂ ತೋರ್ಪಡಿಸಿಕೊಳ್ಳಲಾರದ ಚಂದ್ರೇಗೌಡರ ಹೆಂಡತಿ ಕಮಲಮ್ಮ ತನ್ನ ಗಂಡನ ಮನಸ್ಸು ಬದಲಾಯಿಸುವಂತೆ ದೈವದ ಮೊರೆ ಹೋಗಿ ಬಂದು ಪೂಜೆಯನ್ನು ಮಾಡಿಸಲು ತನ್ನ ಕೆಲಸದಾಳಿನ ಜೊತೆ ನಡೆಯುವ ದೃಶ್ಯ ಕಾದಂಬರಿ ಮತ್ತು ಸಿನಿಮಾದಲ್ಲಿ ಅದ್ಭುತವಾಗಿ ಚಿತ್ರಿಸಿದ್ದಾರೆ. ಬೆಳಗ್ಗೆ ಹಬ್ಬದ ಸಿದ್ಧತೆಯೊಂದಿಗೆ ಕಿಟ್ಟಿಗೆ ಸ್ನಾನ ಮಾಡಿಸಿ, ಬಟ್ಟೆ ಹಾಕಿ ಅವನನ್ನು ತಯಾರು ಮಾಡಿದ ಮೇಲೆ, ತಾನೂ ಸ್ನಾನ ಮುಗಿಸಿ ಬಂದು ಹಬ್ಬಕ್ಕೆ ಮನೆಗೆ ತೋರಣ ಕಟ್ಟಿ, ಪೂಜೆ ಮಾಡಿ ಹಬ್ಬದ ಊಟ ಸವಿಯುವುದರೊಂದಿಗೆ ಸಂಜೆಯ ಚಂದ್ರೇಗೌಡರ ಮಾಮೂಲಿ ಕೆಲಸಕ್ಕೆ ಹೊರ ಹೊರಟಾಗ ಕಮಲಮ್ಮನ ನೋವು ಮತ್ತೆ ಅನುರಣಿಸುತ್ತದೆ. ದುಃಖದಿಂದ ಮಲಗುತ್ತಾರೆ. ಇವು ಸಿನಿಮಾದ ಆರಂಭಿಕ ದೃಶ್ಯಗಳು.

ಆದರೆ ಚಲನಚಿತ್ರದ ದೃಶ್ಯದಂತೆ ಕಾದಂಬರಿಯಲ್ಲಿ ಕಾಣುವುದಿಲ್ಲ. ಆರಂಭ ದೃಶ್ಯ ಹಬ್ಬದ ಹಿಂದಿನ ದಿನ ಸಿದ್ಧತೆ ಮಾರನೇ ದಿನಕ್ಕೆ ಹಬ್ಬ. ಹಬ್ಬ ಮುಗಿದ ರಾತ್ರಿ ಚಂದ್ರೇಗೌಡ ಹೊರಹೋದಾಗ. ಕಮಲಮ್ಮ ಪೂಜೆ ಮಾಡಿಸಲು ಹೊರಡುತ್ತಾಳೆ. ಸಿನಿಮಾದ ಮಾಧ್ಯಮದಲ್ಲಿ ಇದು ಬದಲಾವಣೆಯಾಗಿದೆ. ಆರಂಭ ದೃಶ್ಯದಲ್ಲಿಯೇ ಚಂದ್ರೇಗೌಡರು ಹೊರ ಹೋಗುವುದನ್ನು ಚಿತ್ರಿಸುತ್ತಾರೆ. ಅನಂತರ ಪೂಜೆ, ಅದರ ಮಾರನೆಯ ದಿನ ಹಬ್ಬ ಚಿತ್ರಿಸುತ್ತಾರೆ. ಇಲ್ಲಿ ಸಿನಿಮಾಕ್ಕೆ ಬೇಕಾದ ಚಿತ್ರಕತೆಯನ್ನು ಸಿದ್ಧಪಡಿಸಿಕೊಂಡಿರುವುದು ಕಾಣುತ್ತದೆ. ಇಡಿ ಕಾದಂಬರಿಯ ಕಥೆ ಇರುವುದೇ ಚಂದ್ರೇಗೌಡರಿಗೆ ಇದ್ದ ಅನೈತಿಕ ಸಂಬಂಧದಿಂದ ಅವನ ಮೇಲೆ ಹೊಸೂರಿನವರು ದ್ವೇಷ ಕಟ್ಟಿಕೊಳ್ಳುವುದು ಹಾಗಾಗಿ ಮೊದಲು ಅದನ್ನು ಚಿತ್ರಿಸಿ ಬದಲಾವಣೆ ಮಾಡಿಕೊಂಡಿದ್ದಾರೆ.

ಕಾಡು ಕಾದಂಬರಿಯಾಧಾರಿತ ಚಿತ್ರ 'ಕಾಡು' ಚಲನಚಿತ್ರದ ಮಾಡಿಕೊಂಡಿರುವ ಮೊದಲ ಬದಲಾವಣೆ. ಅನೈತಿಕ ಸಂಬಂಧವನ್ನು ಕುರಿತಾದದ್ದು. ಕಿಟ್ಟಿ ಹಬ್ಬ ಮುಗಿದ ನಂತರದ ದಿನ ಶಾಲೆಯಿಂದ ಬರುವಾಗ ಕಾರೆಹಣ್ಣು ಕಿತ್ತುತರಲು ಹೋದಾಗ ಹನುಮಂತನ ಗುಡಿಯ ಹಿಂದೆ ಗುಡಿಯ ಪೂಜಾರಿರವರು ಹೊಲೆಯ ಜಾತಿಯ 'ಕಾಳ' ಎಂಬಾಕೆಯೊಂದಿಗೆ ಇದ್ದ ದೃಶ್ಯವನ್ನು ಕಿಟ್ಟಿ ನೋಡುತ್ತಿರುವಾಗ ನಾಗಿ ಕರೆದಾಗ "ಥೂ ಸ್ಲೀ' ಎಂದು ಓಡಿಹೋಗುತ್ತಾನೆ. ಅಂದು ಸಂಜೆ ತನ್ನ ಮನೆಯ ಕೆಲಸದ ಆಳುಗಳೆಲ್ಲ ಅಂದು ಮಳೆ ಬಂದದ್ದರಿಂದ ಚಳಗೆ ಬೆಂಕಿ ಹಾಕಿಕೊಂಡು ಕಾಯಿಸುತ್ತಾ ಕೂತಿದ್ದಾಗ ಅಲ್ಲಿಗೆ ಹೋಗಿ ಕಿಟ್ಟಿ ತಾನು ಕಂಡಂತಹ ವಿಚಿತ್ರವನ್ನು ಹೇಳದಾಗ ಎಲ್ಲರು ನಗುತ್ತಾರೆ. ಅದನ್ನು ನೋಡಿದ ಚಂದ್ರೇಗೌಡರು ಏನ್ರಲಾ ಅದು ಎಂದು ವಿಚಾರಿಸಿದಾಗ ಕರಿಯ ಕಿಟ್ಟಿ ಹೇಳದ ವಿಷಯ ಹೇಳದಾಗ ಚಂದ್ರೇಗೌಡರು ಕಿಟ್ಟಿಯನ್ನು ಕರೆದು ಕೆನ್ನೆಗೊಂದು ಬಾರಿಸುತ್ತಾರೆ. ಕಿಟ್ಟಿ ನೋವಿನಿಂದ ಅಳುತ್ತಿದ್ದಾಗ ಕಮಲಮ್ಮ ಬಂದು ಅವನನ್ನು ಎತ್ತಿಕೊಂಡು ಹೋಗುತ್ತಾಳೆ. ಇಂತಿಷ್ಟು ವಿಚಾರಗಳನ್ನು ಸಿನಿಮಾದಲ್ಲಿ ಹಲವಾರು ಬದಲಾವಣೆಗಳೊಂದಿಗೆ ಚಿತ್ರಿಸಿಕೊಂಡಿದ್ದಾರೆ. ಕಿಟ್ಟಿ ತಾನು ನೋಡಿದ ದೃಶ್ಯ ಕಾದಂಬರಿಯಲ್ಲಿದ್ದ ಪಾತ್ರಗಳಾಗಿರದೆ ಹೊಸೂರಿನ ಹನುಮ ಮತ್ತು ಬೇರೆ ಯಾರೋ ಹೆಂಗಸಾಗಿರುತ್ತಾರೆ. ಕಾದಂಬರಿಯಲ್ಲಿ ಎಷ್ಟು ಚಿತ್ರಣಗಳನ್ನಾದರೂ ಚಿತ್ರಿಸಬಹುದು. ಆದರೆ ಚಲನಚಿತ್ರದಲ್ಲಿ ಸಮಯ ಮತ್ತು ನಿರೂಪಣೆಯ ಕ್ರಮಕ್ಕೆ ಅನುಗುಣವಾಗಿ ಬದಲಾವಣೆ ಮಾಡಿಕೊಂಡಿದ್ದಾರೆ. ಅನೈತಿಕ ಸಂಬಂಧವನ್ನು ಚಿತ್ರಿಸಲು ಒಂದು ಉದಾಹರಣೆ ಕೊಡಬೇಕಾಗಿರುವುದರಿಂದ ಹೊಸೂರಿನ ಹನುಮ ಮತ್ತು ಕೊಪ್ಪಲದ ಸಿಂಗಪ್ಪಗೌಡರ ಎರಡನೇ ಹೆಂಡತಿ ಕಲ್ಯಾಣಿಯ ಸಂಬಂಧವನ್ನು ಚಿತ್ರಿಸುತ್ತಾರೆ. ಕಿಟ್ಟಿಗೆ ಕಾದಂಬರಿಯಲ್ಲಿ ಗಂಡು ಹೆಣ್ಣು ಯಾರು ಎಂಬುದು ಸ್ಪಷ್ಟವಾಗಿ ತಿಳಿದಿರುತ್ತದೆ. ಆದರೆ ಸಿನಿಮಾದಲ್ಲಿ ಕಲ್ಯಾಣಿಯ ಮುಖ ಕಾಣದೆ ಹೊಸೂರಿನ ಹನುಮ ಮಾತ್ರ ಆಗಿರುತ್ತಾನೆ. ಇಲ್ಲಿ ಮುಖ್ಯವಾಗಿ ಒಂದು ಅನೈತಿಕ ಚಿತ್ರಣವನ್ನು

ಚಿತ್ರಿಸಬೇಕಾಗಿರುವುದರಿಂದ ಕಾದಂಬರಿಯಲ್ಲಿ ಬರುವ ಪಾತ್ರಗಳನ್ನು ಗೌಣವಾಗಿಸಿ ಇನ್ನೊಂದು ಜೊತೆ ಅನೈತಿಕ ಸಂಬಂಧ ಜೋಡಿಯನ್ನು ಅಲ್ಲಿ ಚಿತ್ರಿಸುತ್ತಾರೆ ಮುಂದೆ ಇದು ಕಥೆಗೆ ಬೇರೆ ರೀತಿಯಲ್ಲಿ ಪೂರಕವಾಗಿರುತದೆ. ಮಾರನೆಯ ದಿನ ಕಿಟ್ಟಿ ಅಲ್ಲಿ ಮತ್ತೊಮ್ಮೆ ಹೋದಾಗ ಅವನಿಗೆ ಕಲ್ಯಾಣಿಯ ಓಲೆ ಸಿಗುತ್ತದೆ. ಅದನ್ನು ತಂದು ತನ್ನ ಆಟದ ವಸ್ತುಗಳ ಜೊತೆ ಇರಿಸಿಕೊಂಡಿರುತ್ತಾನೆ. ಮುಂದೆ ಅದು ಕಲ್ಯಾಣಿಗೆ ಕಿಟ್ಟಿಯ ಹತ್ತಿರ ಇರುವ ಓಲೆಯನ್ನು ಕಂಡ ರಾತ್ರಿಯೇ ಅವಳು ಹನುಮನ ಜೊತೆ ಓಡಿಹೋಗುತ್ತಾಳೆ. ಇದು ಸಿಂಗೇಗೌಡನಿಗೆ ಹೊಸೂರಿನ ಮೇಲೆ ಕೋಪಬರಲು ಕಾರಣವಾಗಿರುತ್ತದೆ. ಚಿತ್ರದ ಕೊನೆಯಲ್ಲಿ ಚಂದ್ರೇಗೌಡರ ಜೊತೆ ಹೋಗಿ ಹೊಸೂರಿನ ವಿರೋಧಿಗಳನ್ನು ಕೊಲ್ಲುವುದಕ್ಕೆ ಕಾರಣವಾಗುತ್ತದೆ. ಕಥೆಗೆ ಬೇಕಾದ ಬೆಳವಣಿಗೆಗೆ ಇದು ಪೂರಕವಾಗಿ ಚಿತ್ರಿತವಾಗಿದೆ. ಆದರೆ ವಾಸ್ತವದ ಕಾದಂಬರಿಯಲ್ಲಿ ಕಲ್ಯಾಣಿ ತನ್ನ ಮನೆಯ ಆಳಿನ ಜೊತೆ ಅನೈತಿಕ ಸಂಬಂಧ ಹೊಂದಿದ್ದು ಮನೆ ಬಿಟ್ಟುಹೋಗಿರುತ್ತಾಳೆ. ಅದನ್ನು ಚಲನಚಿತ್ರದಲ್ಲಿ ಬೇರೆಯದೇ ರೀತಿಯಲ್ಲಿ ಬದಲಾವಣೆ ಮಾಡಿಕೊಂಡಿದ್ದಾರೆ. ಈ ರೀತಿಯ ಬದಲಾವಣೆ ಅತ್ಯಂತ ಪರಿಣಾಮಕಾರಿಯಾಗಿ ಚಿತ್ರದಲ್ಲಿ ಮೂಡಿಬಂದಿದೆ.

ಎರಡನೆಯ ಬದಲಾವಣೆ ಗೌರಿ ಹಸುವಿನ ಸಾವಿನ ಚಿತ್ರಣ ಇಡೀ ಕಾದಂಬರಿಯಲ್ಲಿ ಅತ್ಯಂತ ಮನೋಜ್ಞವಾಗಿ ಚಿತ್ರಿತವಾಗಿದೆ. ಆದರೆ ಸಿನಿಮಾದಲ್ಲಿ ಗೌರಿ ಕಡಸಿನ ಸಾವಿನ ಚಿತ್ರಣವೇ ಬರುವುದಿಲ್ಲ. ಅಲ್ಲಿ ಸಾವಿನ ಸೂಚಕವಾಗಿ ನಾಯಿ ಮೊಣ್ಣ ಸಾಯುವುದನ್ನೇ ಚಿತ್ರಿಸಿದ್ದಾರೆ. ಗೌರಿ ಕಡಸು ಸಿಡಿಮದ್ದನ್ನು ಅಗಿದು ನರಳಾಡಿ ಸಾಯುವುದನ್ನು ಚಿತ್ರಿಸಲು ಸಾಧ್ಯವಿಲ್ಲ. ಹಾಗೆ ನಾಯಿಮೊಣ್ಣನನ್ನು ಕಿರುಬ ಹೊತ್ತುಕೊಂಡು ಹೋಗುವುದನ್ನು ಚಿತ್ರಿಸಲು ಸಾಧ್ಯವಿಲ್ಲ. ಹಾಗಾಗಿ ನಾಯಿಗೆ ವಿಷ ಹಾಕಿ ಸಾಯಿಸಿದ್ದಾರೆ ಎಂದು ಆಳು ಕರಿಯನ ಮೂಲಕ ಒಂದು ಮಾತನ್ನು ಹೇಳಿ ಆ ವಿಚಾರವನ್ನು ಅಲ್ಲಿಗೆ ಮುಗಿಸುತ್ತಾರೆ. ಇಲ್ಲಿ ಸಿನಿಮಾ ಭಾಷೆಯಲ್ಲಿ ಪ್ರತಿಯೊಂದು ದೃಶ್ಯಮಾಧ್ಯಮಕ್ಕೆ ತರಲು ಸಾಧ್ಯವಿಲ್ಲ ಎಂಬುದನ್ನು ತಿಳಿಸಲು ಯತ್ನಿಸಿದ್ದಾರೆ. 70 ರ ದಶಕದ ಸಿನಿಮಾ ಅಷ್ಟು ತಾಂತ್ರಿಕವಾಗಿ ಬೆಳೆಯದೇ ಇದ್ದಿದ್ದು ಇಂತಹ ದೃಶ್ಯಗಳನ್ನು ಅಷ್ಟೊ ಸಮರ್ಪಕವಾಗಿ ಕಟ್ಟಿ ಕೊಡಲು ಸಾಧ್ಯವಿಲ್ಲದೆ ಇರಲು ಕಾರಣವಾಯಿತು. ಇಲ್ಲಿ ಸಾವು ಎನ್ನುವುದನ್ನು ಸಾಂಕೇತಿಕವಾಗಿ ಚಿತ್ರಿಸುವ ಪ್ರಯತ್ನವಷ್ಟೇ ಸಾಧ್ಯವಾಗುತ್ತದೆ. ಅದು ಸಿನಿಮಾದ ಮಿತಿಯು ಕೂಡ ಆಗಿರುತ್ತದೆ. ಆದರೆ ಕಾದಂಬರಿಯಲ್ಲಿ ವಿಶಾಲವಾಗಿ ವಿವರಿಸಲು ಸಾಧ್ಯ. ಸಿನಿಮಾ ಸ್ಪುಟವಾಗಿ ಮತ್ತು ಸುಂದರವಾಗಿ ಚಿತ್ರಿಸುವ ಪ್ರಯತ್ನ ನಿರ್ದೇಶಕರು ಮಾಡಿದ್ದಾರೆ.

ಚಂದ್ರೇಗೌಡರ ರಾಗಿಯ ಮೆದೆಗೆ ಬೆಂಕಿ ಕೊಡುವ ಸಂದರ್ಭದ ಚಿತ್ರಣ ಭಿನ್ನವಾಗಿ ಚಲನಚಿತ್ರದಲ್ಲಿ ನಿರ್ಮಾಣಮಾಡಿದ್ದಾರೆ. ಕಾದಂಬರಿಯಲ್ಲಿ ಚಂದ್ರೇಗೌಡರು ಹೊಸೂರಿನ ಕೊಂಡಯ್ಯನ ಜಮೀನನ್ನು ರಿಜಿಸ್ಟ್ರೇಷನ್ ಮಾಡಿಸಲೆಂದು ಕೋಟೆಗೆ ಹೋಗಿರುತ್ತಾರೆ. ನಾಟಕದ ರಿಹರ್ಸಲ್ ನೋಡಿ ಬಂದು

ಮಲಗಿರುವ ಸಂದರ್ಭದಲ್ಲಿ ಮಧ್ಯರಾತ್ರಿ ಹೊರಗಡೆ ನಾಯಿ ಬೊಗಳುತ್ತಿರುತ್ತದೆ. ಏನದು ಎಂದು ನೋಡಲು ಆಳು ಸಿಳ್ಳ ಬಂದು ನೋಡಿದರೆ ರಾಗಿ ಮೆದೆಗೆ ಬೆಂಕಿ ಬಿದ್ದಿರುತ್ತದೆ. ಎಲ್ಲರು ಅಲ್ಲಿ ಸೇರಿದರು. ಬೆಂಕಿ ನಂದಿಸಲು ಸಾಧ್ಯವಾಗದೇ ಸುಟ್ಟು ಕರಕಲಾಗುತ್ತದೆ. ಮಾರನೇ ಬೆಳಗ್ಗೆ ಬಂದ ಚಂದ್ರೇಗೌಡರು ಯಾವುದೇ ಭಾವನೆಗಳಿಲ್ಲದ ಮನಸ್ಸಿನಲ್ಲಿ ಆ ಆಘಾತವನ್ನು ಸ್ವೀಕರಿಸುತ್ತಾನೆ. ಈ ರೀತಿಯಾದ ಸಂದರ್ಭವನ್ನು ಸಿನಿಮಾದಲ್ಲಿ ಬೇರೆ ರೀತಿಯಲ್ಲಿ ಚಿತ್ರಿಸಿಕೊಂಡಿದ್ದಾರೆ. ಅಂದು ಊರಿನಲ್ಲಿ ನಾಟಕವಿರುತ್ತದೆ. ನಾಟಕ ನೋಡಿಬಂದ ಕಮಲಮ್ಮ ತಮ್ಮ ಮೆದೆಗಳಿಗೆ ಬೆಂಕಿ ಬಿದ್ದ ದೃಶ್ಯ ನೋಡಿ ಭಯಗೊಳ್ಳುತ್ತಾರೆ. ಎಲ್ಲರು ಬಂದು ಮರುಕಪಡುತ್ತಾರೆ. ಆದರೆ ಅಲ್ಲಿ ನಿಜವಾಗಿ ಬದಲಾವಣೆಯನ್ನು ನಿರ್ದೇಶಕ ಮಾಡಿಕೊಂಡಿದ್ದಾನೆ. ಕಾದಂಬರಿಯಲ್ಲಿ ಚಂದ್ರೇಗೌಡರು ಹೊರ ಹೋಗುವುದು ಜಮೀನಿನ ರಿಜಿಸ್ಟ್ರೇಷನ್‌ಗೆ ಎಂದು ಹೊರಹೋಗಿದ್ದ ಅಂದಿನ ರಾತ್ರಿ ರಾಗಿಮೆದೆಗೆ ಬೆಂಕಿ ಇಟ್ಟಿರುತ್ತಾರೆ. ಆದರೆ ಸಿನಿಮಾದಲ್ಲಿ ನಾಟಕವನ್ನು ಎಲ್ಲರೂ ನೋಡುತ್ತಿರುವ ಸಂದರ್ಭದಲ್ಲಿ ಚಂದ್ರೇಗೌಡರ ಕೆಲವು ವಿರೋಧಿಗಳು ಬೆಂಕಿ ಇಡುತ್ತಾರೆ ಎಂದು ಸಿನಿಮಾದಲ್ಲಿ ಚಿತ್ರಿಸುತ್ತಾರೆ. ಅಲ್ಲಿ ಬದಲಾವಣೆ ಅತಿ ಮುಖ್ಯವಾಗುತ್ತದೆ. ಕಾದಂಬರಿಯಲ್ಲಿ ನಡೆಯುವ ಒಂದಷ್ಟು ಸನ್ನಿವೇಶಗಳು ಸಿನಿಮಾದಲ್ಲಿ ಇಲ್ಲವಾಗಿಸಲು ಈ ಕ್ರಿಯೆ ನಡೆದಿರುತ್ತದೆ. ಕಾದಂಬರಿಯಲ್ಲಿ ಬರುವ ಜಮೀನಿನ ಕ್ರಯದ ವಿಚಾರ, ಸಾವಿತ್ರಮ್ಮನ ಆತ್ಮಹತ್ಯೆ, ಗೌರಿ ಕಡಸಿನ ಸಾವು, ಸಿಂಗಪ್ಪಗೌಡರ ತಾಯಿಯ ಸಾವು ಈ ಎಲ್ಲ ವಿಚಾರಗಳನ್ನು ಸಿನಿಮಾದಿಂದ ಕೈಬಿಟ್ಟಿದ್ದಾರೆ. ಯಾಕೆಂದರೆ 'ಸಮಯ'ದ ಕಾರಣಕ್ಕೆ ಬದಲಾವಣೆ ಮಾಡಿಕೊಳ್ಳಬೇಕಾದ ಅನಿವಾರ್ಯತೆಯಾಗಿರುತ್ತದೆ. ಆದರೆ ಈ ರಾಗಿಮೆದೆಯ ಸನ್ನಿವೇಶದಲ್ಲಿ ಚಂದ್ರೇಗೌಡರು ಅಂದು ಊರಿನಲ್ಲೇ ಇದ್ದರು. ಬೆಂಕಿಯ ಹತ್ತಿರ ಬರದೇ ಇರುವುದು ವಾಸ್ತವದ ಕ್ರಿಯೆಗೆ ಸ್ವಲ್ಪ ನೋಡುಗರಲ್ಲಿ ಗೊಂದಲ ಉಂಟಾಗಬಹುದು. ಅದನ್ನು ಸ್ವಲ್ಪ ಸಮರ್ಪಕವಾಗಿ ಬಳಸಿಕೊಳ್ಳುವಲ್ಲಿ ನಿರ್ದೇಶಕರು ಎಡವಿದ್ದಾರೆ. ಯಾಕೆಂದರೆ ಊರಿನಲ್ಲಿ ಇದ್ದರು. ಊರಿನ ಜನರೆಲ್ಲ ಅಲ್ಲಿ ಬಂದಿದ್ದರು ಸ್ವತಃ ಯಜಮಾನ ಬರದೆ ಇರುವುದು ಹಲವಾರು ಅನುಮಾನಗಳಿಗೆ, ಗೊಂದಲಗಳಿಗೆ ಎಡೆಮಾಡಿಕೊಡಲು ಸಾಧ್ಯವಿದೆ.

ಸಿನಿಮಾದ ಸಮಯಕ್ಕೆ ಹೊಂದಿಕೆಯಾಗುವಂತಹ ಕಥೆಗೆ ಪೂರಕವಾಗುವಂತಹ ದೃಶ್ಯಗಳನ್ನು ಚಿತ್ರಿಸಿಕೊಳ್ಳುತ್ತಾರೆ. ಸಿನಿಮಾದಲ್ಲಿ ನಾಟಕ ನಡೆಯುತ್ತದೆ. ಕಲ್ಯಾಣಿ ಹಬ್ಬದ ಹಿಂದಿನ ದಿನ ತನ್ನ ಪ್ರಿಯಕರನೊಂದಿಗೆ ಬೇರೆ ಕಡೆ ಓಡಿಹೋಗುತ್ತಾಳೆ. ಆದರೆ ಕಾದಂಬರಿಯ ಕಥೆಯಲ್ಲಿನ ರೀತಿಯಲ್ಲಿ ನಡೆಯದೇ ಬೇರೆ ರೀತಿಯಲ್ಲಿ ಚಿತ್ರಣವಾಗಿದೆ. ಅದೆಲ್ಲವೂ ಕೂಡ ಸಿನಿಮಾ ಭಾಷೆಯನ್ನು ಸಮರ್ಪಕವಾಗಿ ಬಳಕೆಮಾಡಿಕೊಂಡು ಕಾರಣಕ್ಕಾಗಿಯೇ ಆಗಿರುತ್ತದೆ. ಇನ್ನು ಕಡೆಯದಾಗಿ ಸಿನಿಮಾದ ಅಂತ್ಯದಲ್ಲಿ ಚಂದ್ರೇಗೌಡರು ಇನ್ನಿತರರ ಮೇಲೆ ಓಕುಳಿ ಹಬ್ಬದ ದಿನ ಆದಂತಹ ಗಲಾಟೆಯಿಂದ ಹೊಸೂರಿನ ಕೆಲವರಿಗೆ

ಮಾರಣಾಂತಿಕ ಗಾಯಗಳಾಗಿರುತ್ತವೆ. ಅವರು ಪೋಲೀಸರಿಗೆ ಕಂಪ್ಲೆಂಟ್ ಕೊಟ್ಟು ಕೊಪ್ಪಳದ ಚಂದ್ರೇಗೌಡ ರುದ್ರಪ್ಪ ಇನ್ನಿತರನ್ನು ಅರೆಸ್ಟ್ ಮಾಡಿ ಕರೆದುಕೊಂಡು ಹೋಗಿರುತ್ತಾರೆ. ಕಮಲಮ್ಮ ತಮ್ಮ ಗಂಡ ಜಾಗ್ರತೆಯಿಂದ ಈ ಅಪಾಯದಿಂದ ಹೊರಬರಲಿ ಎಂದು ದೇವಸ್ಥಾನಕ್ಕೆ ಹೋಗಿ ಪೂಜೆ ಮುಗಿಸಿ ಬರಬೇಕಾದರೆ ಹೊಸೂರಿನ ಶಿವಗಂಗ, ಕೊಪ್ಪಳದ ಪುಟ್ಟಸ್ವಾಮಿ ಇನ್ನಿತರರು ಕಮಲಮ್ಮನ ಮೇಲೆ ರಾಕ್ಷಸರಂತೆ ಬಿದ್ದು ಅತ್ಯಾಚಾರ ಮಾಡುತ್ತಾರೆ. ಕೊನೆಗೆ ಆ ದಾಳಿಗೆ ಸಿಕ್ಕಿದ ಕಮಲಮ್ಮ ನರಳಿ ನರಳಿ ಮನೆಯಲ್ಲಿ ಪ್ರಾಣಬಿಡುತ್ತಾಳೆ. ಜಾಮೀನಿನ ಮೇಲೆ ಬಂದ ಚಂದ್ರೇಗೌಡರು ಬಂದು ಹೆಂಡತಿಯ ದುಸ್ಥಿತಿಯನ್ನು ಕಂಡು ಕೋಪದಿಂದ ತೊಲೆಯ ಮೇಲೆ ಇದ್ದ ದೊಡ್ಡ ಮಚ್ಚನ್ನು ತೆಗೆದು ಟಗರಿನ ತಲೆಯನ್ನು ಕತ್ತರಿಸಿದರು. ಎಂದು ತನ್ನ ವಿರೋಧಿಗಳನ್ನು ಏಕಾಂಗಿಯಾಗಿ ಅಂತ್ಯಕಾಣಿಸಿದರು. ಎಂದು ಸೂಚ್ಯವಾಗಿ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಕಿಟ್ಟಿಗೆ ಈ ರಾಕ್ಷಸ ಲೋಕದಿಂದ ಹೊರ ಹೋಗಬೇಕೆಂದೆನಿಸುತ್ತದೆ. ತನ್ನ ತಂದೆ ತಾಯಿ ಬರಲಿ ಎಂದು ಕಾಯುತ್ತ ಕುಳಿತಿರುತ್ತಾನೆ.

ಈ ಸನ್ನಿವೇಶವನ್ನು ಸಿನಿಮಾವಾಗಿಸುವ ಸಂದರ್ಭದಲ್ಲಿ ನಿರ್ದೇಶಕರು ಕಥೆಗೆ ಪೂರಕವಾಗಿ ಸಿನಿಮಾವನ್ನು ಬೆಳೆಸಿಕೊಂಡಿದ್ದಾರೆ. ಓಕುಳಿಯ ಗಲಾಟೆಗೆ ಕಂಪ್ಲೆಂಟ್ ಕೊಡುತ್ತಾರಂತೆ. ನೀನು ಒಂದು ವಾರದ ಮಟ್ಟಿಗೆ ರಾತ್ರಿ ಬರಬೇಡ ಎಂದು ಬಸಕ್ಕ ಆಳಿನ ಕೈಲಿ ಹೇಳಿ ಕಳಿಸಿದಾಗ ಚಂದ್ರೇಗೌಡ ನಾಳೆಯೆ ಬರುತ್ತೀನಿ ಎಂದು ಹೇಳು ಎಂದು ಹೇಳಿ ಕಳುಹಿಸಿ ಇವರು ಮಾರನೆ ದಿನ ಹೊರಡುತ್ತಾರೆ. ಕಮಲಮ್ಮ ಪೂಜೆಗೆ ಎಂದು ಹೋಗಿ ದಾಳಿಗೆ ಒಳಗಾಗುತ್ತಾಳೆ. ಇಲ್ಲಿ ಚಲನಚಿತದ್ರ 'ನಾಯಕ' ಚಂದ್ರೇಗೌಡರು ಸಿನಿಮಾದ ಕಲ್ಪನೆಯಲ್ಲಿ 'ಹೀರೋಯಿಸಂ' ತೋರಿಸಲು ಹೋಗುತ್ತಾನೆ. ತನ್ನನ್ನು ಯಾರು ಏನು ಮಾಡಲು ಸಾಧ್ಯವಿಲ್ಲ ಎಂಬುದನ್ನು ಸಾಬೀತು ಮಾಡಲು ಹೊರಡುತ್ತಾನೆ. ಕಾರಣ ಸಿನಿಮಾದಲ್ಲಿ ಅಕಾಲಕ್ಕೆ 'ಹೀರೋ'ನನ್ನು ವಿಜೃಂಭಿಸುವ ಪದ್ಧತಿ ಜಾರಿಗೆ ಬಂದಿದ್ದರಿಂದ ಅದೊಂದು ಸಿನಿಮಾ ಭಾಷೆಯಾಗಿ ಬದಲಾವಣೆಯಾಗುವ ಅನಿವಾರ್ಯವಿತ್ತು. ಅಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಯಿತು. ಅತ್ಯಾಚಾರ ಆಗಿ ಅವಳು ಸಾವಿನ ನಡುವೆ ಹೋರಾಟ ಮಾಡುತ್ತಿರುವಾಗ ಚಂದ್ರೇಗೌಡ ತನ್ನ ವಿರೋಧಿಗಳಿಗೆ ಶಿಕ್ಷೆ ನೀಡಲು ಹೊರಡುತ್ತಾನೆ. ಅವನೊಂದಿಗೆ ಸಿಂಗಪ್ಪಗೌಡ, ರುದ್ರಪ್ಪ, ಆಳುಗಳು ಎಲ್ಲರು ಹೋಗಿ ವಿರೋಧಿಯ ಊರಿನ ಜನರನ್ನು ಕತ್ತರಿಸಿ ಹಾಕುತ್ತಾರೆ. ನಂತರ ಪೋಲೀಸರು ಇಡೀ ಊರಿಗೆ 'ಕರ್ಫ್ಯೂ' ವಿಧಿಸಿ ಎರಡು ಊರುಗಳ ಘರ್ಷಣೆಯನ್ನು ನಿಲ್ಲಿಸುತ್ತಾರೆ. ಹಾಗೆ ಅಪರಾಧಿಗಳನ್ನು ದಸ್ತಗಿರಿ ಮಾಡುತ್ತಾರೆ. ಕಿಟ್ಟಿಗೆ ಈ ರಾಕ್ಷಸ ಲೋಕದಲ್ಲಿ ಅನಾಥನಂತೆ ಭಾಸವಾಗುತ್ತದೆ. ಕಾಡಿನ ಮಧ್ಯೆ ಹೋಗಿ ಕುಳಿತು ತನ್ನವರಿಗಾಗಿ ಕಾಯುತ್ತಿರುತ್ತಾನೆ. ಹೀಗೆ ಸಿನಿಮಾದ ಕ್ಲೈಮಾಕ್ಸ್ ಆಗುತ್ತದೆ.

ಈ ಸನ್ನಿವೇಶದಲ್ಲಿ ನಿರ್ದೇಶಕರು ಸಿನಿಮಾ ಯಾವ ರೀತಿ ಬೇಕೋ ಹಾಗೆ ಬದಲಾವಣೆ ಮಾಡಿಕೊಂಡಿರುವುದನ್ನು ಕಾಣುತ್ತೇವೆ. ಸಿನಿಮಾದ ತಾಂತ್ರಿಕ ಭಾಷೆಗೆ ಪ್ರೇಕ್ಷಕರನ್ನು ಗಮನದಲ್ಲಿರಿಸಿಕೊಂಡು ಈ ರೀತಿಯಾದ ಬದಲಾವಣೆ ಮಾಡಿಕೊಂಡಿದ್ದಾರೆ. ಎಲ್ಲವನ್ನು ಆಕರ್ಷಕವಾಗಿ ತೋರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅದು ಸಿನಿಮಾದ ರೀತಿಗೆ ಮುಖ್ಯವು ಆಗಿರುತ್ತದೆ. ಹಲವಾರು ಸನ್ನಿವೇಶಗಳನ್ನು, ಸಂದರ್ಭಗಳನ್ನು ಬಿಟ್ಟರೆ ಕೆಲವು ಮಾರ್ಪಾಡುಗಳೊಂದಿಗೆ ಚಿತ್ರ ಯಶಸ್ವಿಯಾಗಿದೆ.

'ಪರಸಂಗದ ಗೆಂಡೆತಿಮ್ಮ' ಕಾದಂಬರಿಯ ಗೆಂಡೆತಿಮ್ಮ " ಆಧುನಿಕವಾಹಕವಾಗಿ ಕಂಡುಬಂದರೂ ಅವನು ಆಧುನಿಕನಲ್ಲ. ಹಾಗಾಗಿ ಅವನ ಸಂಕಟಗಳನ್ನು ಅವನೇ ಮುಗ್ಧನಾಗಿ, ಸೋಜಿಗದಿಂದ ನೋಡಬಲ್ಲ. ಹೀಗೆ ಕಾದಂಬರಿಯು ಆಧುನಿಕತೆಯನ್ನು ನೋಡುವ ಕ್ರಮವೇ ವಿಶಿಷ್ಟವಾಗಿದೆ. ಮರಂಕಿ, ಅವಳ ಅತ್ತೆ ಬೇದಿಯಮ್ಮ, ಗೆಂಡೆತಿಮ್ಮ ಎಲ್ಲರೂ ಅವರವರ ಲೋಕದಮಟ್ಟಿಗೆ ಸರಿಯೇ. ಇಲ್ಲಿ ಮನಕಲಕುವ ದುರಂತವಿದ್ದಾಗಲೂ ಯಾರನ್ನು ದೂಷಿಸುವುದು? ಅದು ಅಸಾಧ್ಯ ಎಂಬ ಮಟ್ಟಿಗೆ ಕೃಷ್ಣರವರು ಸಮತೂಕದಿಂದ ಈ ಬದುಕನ್ನು ಚಿತ್ರಿಸಿದ್ದಾರೆ. ಯಾವುದೇ ಬದಲಾವಣೆಯ ಕಾಲದಲ್ಲಿ ಹುಟ್ಟುವ ನೈತಿಕ ಬಿಕ್ಕಟ್ಟುಗಳು ಇಲ್ಲಿಯ ದುರಂತಕ್ಕೆ ಕಾರಣವಾಗುತ್ತವೆ. ಇದಕ್ಕೆ ಯಾರನ್ನೂ ಹೊಣೆಗಾರರನ್ನಾಗಿಸುವ ಕ್ರಮ ಮಾಡದೆ ಇರುವುದರ ಮೂಲಕ ಬದಲಾವಣೆಯ ಅನಿವಾರ್ಯತೆಯನ್ನು ಒತ್ತಿ ಹೇಳಿದ್ದಾರೆ."[4] 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯು ಬರಹ ರೂಪದ ಕೃತಿಯಾಗಿ ಭಾರಿ ಯಶಸ್ಸನ್ನು ಪಡೆಯಿತು. ಅದೇ ರೀತಿ 'ಮಾರುತಿಶಿವರಾಂ'ರವರ ನಿರ್ದೇಶನದಲ್ಲಿ ಬಂದ 'ಪರಸಂಗದ ಗೆಂಡೆತಿಮ್ಮ' ಚಿತ್ರವು ಅದ್ಭುತ ಯಶಸ್ಸನ್ನು ಪಡೆಯಿತು. ಸಾಹಿತ್ಯ ಕೃತಿಯೊಂದರ ರೂಪಾಂತರ ಮಾಡುವಾಗ ಅತ್ಯಂತ ಜಾಗ್ರತೆ, ಚಾಣಕ್ಷತೆ ನಿರ್ದೇಶಕನಿಗೆ ಇರುತ್ತದೆ. 'ಪರಸಂಗದ ಗೆಂಡೆತಿಮ್ಮ' ಕೃತಿಯನ್ನು ಸಿನಿಮಾ ರೂಪ ಮಾಡುವಾಗ ಹಲವಾರು ಬದಲಾವಣೆಗಳನ್ನು ಮಾಡಿಕೊಂಡು ಯಶಸ್ವಿಯಾಗಿಸಿದ್ದಾರೆ.

ಕಾದಂಬರಿಯ ಮೊದಲ ಅಧ್ಯಾಯ ಬೇಸಿಗೆಯ ಚಿತ್ರಣವನ್ನು ನೀಡುತ್ತದೆ. ಉರಿ ಬಿಸಿಲಿನಲ್ಲಿ ಗೆಂಡೆತಿಮ್ಮ ನಡೆದುಕೊಂಡು ಗೌವಳ್ಳಿ ಕಡೆ ಹೊರಡಿರುತ್ತಾನೆ. ಯಾವುದೇ ಗಾಡಿಗೆ ಕಾಯದೇ ಹೊರಡಲು ಕಾರಣ ತನಗೆ ನಿಶ್ಚಯವಾಗಿದ್ದ ಮದುವೆ ವಿಚಾರವನ್ನು ತನ್ನ ಆಪ್ತರಿಗೆ ತಿಳಿಸಲು ಬೇಗ ಊರು ಸೇರಬೇಕೆಂದು ಹೊರಟು ಬಿಸಿಲಿನ ಝಳಕ್ಕೆ ಕತ್ತರಿಸಿ ಮರದ ಕೆಳಗೆ ಕೂತು ಸುದಾರಿಸಿಕೊಂಡು ಊರಿನ ಕಡೆ ಪ್ರಯಾಣ ಮಾಡುವಂತಹ ಚಿತ್ರಣವಿದೆ. ಆದರೆ ಸಿನಿಮಾದಲ್ಲಿ ಈ ದೃಶ್ಯವಿಲ್ಲ ಬದಲಿಗೆ ಗೆಂಡೆತಿಮ್ಮ ಮನೆಯಲ್ಲಿ ಮಲಗಿರುತ್ತಾನೆ. ಅವನ ತಾಯಿ ಬೇದಿಯಮ್ಮ ಅವನನ್ನು ಬೈಯ್ದು ಎಬ್ಬರಿಸಿ ವ್ಯಾಪಾರಕ್ಕೆ

ಹೋಗು ಎಂದು ಕಳುಹಿಸುವ ದೃಶ್ಯವಿದೆ. ಇಲ್ಲಿ ಹಲವಾರು ಬದಲಾವಣೆಗಳನ್ನು ನಿರ್ದೇಶಕ ತನ್ನ ಕಲ್ಪನೆಗೆ ಅನುಗುಣವಾಗಿ ಮಾಡಿಕೊಂಡಿದ್ದಾರೆ. ಯಾಕೆಂದರೆ ಪ್ರತಿಯೊಂದನ್ನು ಸೃಷ್ಟಿಸಲು ದೃಶ್ಯಗಳ ಸಂಖ್ಯೆ ಜಾಸ್ತಿ ಆಗಬಹುದೆಂಬ ಕಾರಣಕ್ಕೆ ಕೆಲವು ಸಂದರ್ಭಗಳನ್ನ ಚಲನಚಿತ್ರದಿಂದ ಕೈ ಬಿಡುತ್ತಾರೆ.

ಗೆಂಡೆತಿಮ್ಮ ಊರಿಗೆ ಹೊರಟವನೆ ತನಗೆ ಆತ್ಮೀಯರಾದ ದೇವಿರವ್ವನಿಗೆ ವಿಷಯ ತಿಳಿಸಬೇಕೆಂಬ ಹಂಬಲದಲ್ಲಿ ಮುನ್ನಡೆಯುತ್ತಾನೆ. ನಂತರ ಬೆಳಗ್ಗೆ ವ್ಯಾಪಾರ ಮುಗಿಸಿ ಸಂಜೆ ಮುದ್ದನೊಂದಿಗೆ ಹರಟುತಿರಬೇಕಾದರೆ ತನ್ನ ಹೆಂಡತಿ ಹೇಗಿದ್ದಾಳೆ ಎಂಬುದನ್ನು ಒಂದು ಹಾಡಿನ ಮೂಲಕ ವಿವರಿಸುತ್ತಾನೆ. ಮರಂಕಿಯ ಸೌಂದರ್ಯವನ್ನು ಕುರಿತು ಅಷ್ಟೇನು ವಿವರಣೆಗಳು ಕಾದಂಬರಿಯಲ್ಲಿ ಕಂಡುಬರುವುದಿಲ್ಲ. ಆದರೆ ಸಿನಿಮಾದಲ್ಲಿ ಅವಳನ್ನು ಪರಿಚಯಿಸುವ ರೀತಿಯ ಹಾಡುಬರುತ್ತದೆ. ಇದು ವಾಣಿಜ್ಯ ಸಿನಿಮಾ ಆಗಿರುವುದರಿಂದ ಎಲ್ಲ ರೀತಿಯ ಮಸಾಲೆಗಳನ್ನು ಸೃಷ್ಟಿಸಬೇಕಾದ ಅನಿವಾರ್ಯತೆ ನಿರ್ದೇಶಕನಿಗೆ ಇರುತ್ತದೆ.

ಪರಸಂಗದ ಗೆಂಡೆ ತಿಮ್ಮ ಕಾದಂಬರಿಯಲ್ಲಿನ ಚಿತ್ರಣಗಳನ್ನು ಚಲನಚಿತ್ರದಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಗೌವಳ್ಳಿಯ ತಮ್ಮಣ್ಣ ಎಂಬ ಚಿಕ್ಕುಲನ ಪಾತ್ರವನ್ನು ತಮ್ಮದೇ ಊರಿನ ಸಾಲುಂಡಿಯ ವ್ಯಕ್ತಿಯಾಗಿ ಬದಲಾವಣೆ ಮಾಡಿಕೊಂಡಿದ್ದಾರೆ. ಅಲ್ಲಿ ಬೇರೆ ಬೇರೆ ಪಾತ್ರಗಳನ್ನು ಸೃಷ್ಟಿಸುವುದು ಕಷ್ಟವಾಗಬಹುದು ಎಂಬ ಕಾರಣಕ್ಕೆ ಹಾಗೆಯೇ ಕಾದಂಬರಿಯಲ್ಲಿ ಮರಂಕಿಯ ಅಚ್ಚುಕಟ್ಟಿನ ಸ್ವಚ್ಛತೆಯ ಕಾರಣಕ್ಕೆ ಹೆಮ್ಮೆ ಪಟ್ಟಿದ್ದ ಅತ್ತೆ ಮತ್ತೆ ಮುಂದೆ ಅದೇ ಸ್ವಚ್ಛತೆ ಮರಂಕಿಗೆ ಮುಳುವಾಗಿ ಪರಿಣಮಿಸುತ್ತದೆ. ಜಗಳಗಳು ಉಂಟಾಗಲು ಕಾರಣವಾಗುತ್ತದೆ. ಒಮ್ಮೆ ಜಗಳವಾಡಿದಾಗ ಮರಂಕಿಯ ಅಪ್ಪ ಬಂದು ಮಗಳನ್ನು ಕರೆದುಕೊಂಡು ಹೋಗುತ್ತಾನೆ. ಎಷ್ಟು ದಿನಗಳಾದರು ಕರೆದುಕೊಂಡು ಬಂದಿರುವುದಿಲ್ಲ ಕಡೆಗೆ ಇವನೇ ಕೇಳಲು ಸಾಧ್ಯವಿಲ್ಲದೇ ಒದ್ದಾಡಿ ಕೊನೆಗೊಮ್ಮೆ ಅಣ್ಣ-ಅತ್ತಿಗೆ ಹೋಗಿ ಕರೆತಂದ ಮೇಲೆ ಸ್ವಲ್ಪ ದಿನ ಸುಖವಾಗಿಯೇ ಇರುತ್ತಾರೆ. ಮತ್ತೆ ಜಗಳವಾದಾಗ ಮತ್ತೆ ತವರು ಸೇರುತ್ತಾಳೆ ಮರಂಕಿ. ಆಗ ಗೆಂಡೆತಿಮ್ಮನ ನೋಡಲು ಹೋದಾಗ ಅವನ ಮಾವ ಆಸ್ತಿಯ ಪಾಲು ಮಾಡುವ ವಿಚಾರ ಹೇಳುತ್ತಾನೆ. ಅದನ್ನು ಜೀರ್ಣಿಸಿಕೊಳ್ಳಲು ಸಾಧ್ಯವಿಲ್ಲದ ಗೆಂಡೆತಿಮ್ಮ ಅದನ್ನು ತನಗೆ ಬೇಕಾದ ದೇವಿರಮ್ಮನ ಹತ್ತಿರ ಚರ್ಚಿಸಿದನು. ಅವರ ಮಾತುಗಳಂದ ಪ್ರೇರಣೆಗೊಂಡು, ಆಸ್ತಿ ಪಾಲಾಗುವ ವಿಚಾರಕ್ಕೆ ಬರುತ್ತಾನೆ. ಈ ಸನ್ನಿವೇಶಗಳನ್ನು ಚಲನಚಿತ್ರದಲ್ಲಿ ಬೇರೆಯದೇ ರೀತಿಯಲ್ಲಿ ಚಿತ್ರಿಸಿಕೊಂಡಿದ್ದಾರೆ. ಒಮ್ಮೆ ಜಗಳವಾದಾಗ ಮಾವ ಬಂದು ಮಗಳನ್ನು ಕರೆದುಕೊಂಡು ಹೋಗುವಾಗ ಆಸ್ತಿ ಪಾಲಿನ ವಿಚಾರ ಹೇಳುತ್ತಾನೆ. ಮರಂಕಿ ಆಸ್ತಿ ಪಾಲಾಗಿ ಬೇರೆ ಮನೆ ಮಾಡುವವರಿಗೂ ನಾನು ಬರುವುದಿಲ್ಲ ಎಂಬ ನಿರ್ಧಾರವನ್ನು ಮಾಡುತ್ತಾಳೆ. ಪಾಲಾದ ಮೇಲೆ ಹೊಸಮನೆಯನ್ನು ನಿರ್ಮಾಣ ಮಾಡಿದ ಮೇಲೆ ಮರಂಕಿ ಮನೆಗೆ ಬರುತ್ತಾಳೆ. ಇಲ್ಲಿ

ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಹಲವಾರು ಬಾರಿ ಮನೆಯಲ್ಲಿ ಜಗಳಗಳು ಆಗುತ್ತವೆ. ಅವುಗಳನ್ನು ಪ್ರತಿ ಬಾರಿ ಚಿತ್ರಿಸದೆ ಕೇವಲ ಒಂದು ಜಗಳವನ್ನಷ್ಟೆ ಚಿತ್ರಿಸಿ ಪಾಲಾಗುವ ಚಿತ್ರಣ ನೀಡುತ್ತಾರೆ. ಕಾರಣ ಸಮಯ ಮತ್ತು ಅನಾವಶ್ಯಕ ದೃಶ್ಯಗಳನ್ನು ತೆಗೆಯಬೇಕೆಂಬ ಕಾರಣಕ್ಕೆ ಈ ರೀತಿಯ ಬದಲಾವಣೆ ಮಾಡಿಕೊಳ್ಳುತ್ತಾರೆ.

ಕಾದಂಬರಿಯಲ್ಲಿ ಇಡಿ ಗೌವಳ್ಳಿಯ ಯುವ ಹೆಣ್ಣುಮಕ್ಕಳಿಗೆ ತಾನು ಆಧುನಿಕ ವಸ್ತುಗಳನ್ನು ಬಳಸಿಕೊಳ್ಳಬೇಕು. ನಾನು ಹಾಗೆ ಸುಂದರವಾಗಿರವಂತೆ ಕಾಣಬೇಕೆಂದು ಗುಪ್ತವಾಗಿ ಗೆಂಡೆತಿಮ್ಮನ ಕೈಯಲ್ಲಿ ತರುಸಿ ಉಪಯೋಗಿಸುತ್ತಾರೆ. ಅದು ದೊಡ್ಡದಾಗಿ ಊರಲ್ಲೆಲ್ಲ ಬೆಳೆಯುತ್ತದೆ. ಗಂಡಂದಿರು ಈ ಹೊಸ ಬದಲಾವಣೆಗಳನ್ನು ಒಪ್ಪಿಕೊಂಡಿರುತ್ತಾರೆ. ಆದರೆ ಅತ್ತೆಯಂದಿರಿಗೆ ಇದು ಇಷ್ಟವಾಗದೆ ಮನೆಯಲ್ಲಿ ಜಗಳದ ವಾತಾವರಣ ಏರ್ಪಟ್ಟಿರುತ್ತದೆ. ಅದೊಂದು ದೊಡ್ಡಮಟ್ಟದ ಚಲನೆಯಾಗಿ ಇಡಿ ಊರೇ ಗೆಂಡೆತಿಮ್ಮನ ಮೇಲೆ ಕೋಪಕಾರಿ ಪಂಚಾಯಿತಿ ಮಾಡಿ ದಂಡ ಹಾಕಿ ದೈಹಿಕವಾಗಿಯು ಹಲ್ಲೆ ನಡೆಸುತ್ತಾರೆ. ಇದನ್ನು ಅತ್ಯಂತ ಸೂಕ್ಷ್ಮತೆಯಿಂದ ಕಾದಂಬರಿಯಲ್ಲಿ ಚಿತ್ರಿಸಿಕೊಂಡಿದ್ದಾರೆ. ಆದರೆ ಇದನ್ನು ಸಿನಿಮಾವಾಗಿ ತರುವಲ್ಲಿ ನಿರ್ದೇಶಕರು ಎಡವಿದ್ದಾರೆ. ಕಾದಂಬರಿಯಲ್ಲಿ ಬರುವ ಈ ಸನ್ನಿವೇಶದ ಪರಿಣಾಮ ಚಲನಚಿತ್ರದಲ್ಲಿ ಮೂಡಿಬಂದಿಲ್ಲ. ಅದರ ಪ್ರಭಾವ ಕಟ್ಟಿಕೊಡುವಲ್ಲಿ ನಿರ್ದೇಶಕರಿಗೆ ಸವಾಲಾಗಿ ಪರಿಣಮಿಸಿದೆ.

ಇನ್ನು ಕಾದಂಬರಿಯಲ್ಲಿ ಮರಂಕಿಯ ಅನೈತಿಕ ಸಂಬಂಧಗಳನ್ನು ವಿಭಿನ್ನವಾಗಿ ಚಿತ್ರಿಸಿದ್ದಾರೆ. ತಮ್ಮ ಊರಿನ ಸ್ಕೂಲ್ ಮಾಸ್ಟರ್ ಶಿವಣ್ಣ ಇರಬಹುದು. ತನ್ನ ಸೋದರ ಮಾವನಿರಬಹುದು ಇವರಿಬ್ಬರ ನಡುವಿನ ಸಂಬಂಧವನ್ನು ಕಾದಂಬರಿಕಾರ ಬಹಳ ಮುಕ್ತವಾಗಿ ಕಟ್ಟಿಕೊಟ್ಟಿದ್ದಾರೆ. ಮರಂಕಿಗೆ ತಪ್ಪು ಎಂದು ಅನ್ನಿಸುವುದಿಲ್ಲ. ಮದುವೆಗೆ ಮುಂಚೆ ಸೋದರ ಮಾವನ ಜೊತೆ ಕೂಡಿದ್ದನ್ನು ಮದುವೆ ನಂತರ ಅವನ ಜೊತೆ ಒಂದು ರಾತ್ರಿ ಕಳೆದಿದ್ದನ್ನು ಅವಳು ವಿಶ್ಲೇಷಿಸುವ ಬಗೆಯೇ ಬೇರೆ. ತಾನು ಬೇರೆ ಜಾತಿಯವರನ್ನು ಕೂಡಿಲ್ಲ ನಮ್ಮಲ್ಲಿ ದುಡ್ಡಿಗೋಸ್ಕರ ಹಲವಾರು ಹೆಣ್ಣುಗಳು ಬೇರೆ ಬೇರೆಯವರನ್ನು ಸೇರಿದ್ದಾರೆ. ನಾನು ಸೇರಿರುವುದು ನನ್ನ ಮಾವನ ಜೊತೆ ಎಂಬ ತರ್ಕವನ್ನು ತನಗೆ ತಾನೆ ಹೇಳಿಕೊಳ್ಳುತ್ತಾಳೆ. ಸ್ಕೂಲ್‌ಮಾಸ್ಟರ್ ಶಿವಣ್ಣನ ಜೊತೆಗಿದ್ದ ಸಂಬಂಧವನ್ನು ಅದೊಂದು ಹೆಚ್ಚುಗಾರಿಕೆ ಎಂದೇ ಅವಳು ಗ್ರಹಿಸುತ್ತಾಳೆ. ಕೆಲವೊಮ್ಮೆ ತನ್ನ ಗಂಡ ತೋರುವ ಪ್ರೀತಿ ಇವಳಿಗೆ ತಪ್ಪು ಮಾಡುತ್ತಿದ್ದೇನೆ ಎಂದು ಅನಿಸಿದರು ಮರುಗಳಿಗೆ ತನ್ನ ತರ್ಕವೇ ಸರಿ ಎಂಬುದಾದ ರೀತಿಯಲ್ಲಿ ತೊಡಗುತ್ತಾಳೆ. ಈ ರೀತಿಯ ಚಿತ್ರಣವನ್ನು ಕಾದಂಬರಿ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಆದರೆ ಸಿನಿಮಾದಲ್ಲಿ ಸೋದರಮಾವನ ಜೊತೆಗಿನ ಸಂಬಂಧವನ್ನು ಚಿತ್ರಿಸುವುದಿಲ್ಲ. ಕೇವಲ ಶಿವಣ್ಣನ ಜೊತೆಗಿನ ಸಂಬಂಧವನ್ನು ಹೇಳಿ ಮುಗಿಸುತ್ತಾರೆ. ಕಾದಂಬರಿಯಲ್ಲಿ ಅವಳ ಮನಸ್ಸಿನಲ್ಲಿ ಬರುವ ಈ ರೀತಿಯಾದ ತೊಳಲಾಟಗಳನ್ನು ಸಿನಿಮಾದಲ್ಲಿ ತೋರಿಸಲು ವಿಫಲರಾಗಿದ್ದಾರೆ.

ಒಟ್ಟಾರೆ ಕಾದಂಬರಿಯ ಹಲವಾರು ಬದಲಾವಣೆಯೊಂದಿಗೆ ಸಿನಿಮಾ ಅತ್ಯಂತ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಅದು ಪ್ರೇಕ್ಷರನ್ನು ಕೂಡ ರಂಜಿಸಿ ಅವರ ಮನಸ್ಸು ಗೆದ್ದು ಅದ್ಭುತ ಯಶಸ್ಸು ಪಡೆದಿದೆ. ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಚಲನಚಿತ್ರ ಕಾದಂಬರಿಯ ಮೌಲ್ಯವನ್ನು ಉಳಸುತ್ತದೆ. ಯಾವುದೇ ರೀತಿಯಲ್ಲಿ ಮೌಲ್ಯಗಳಗೆ ಧಕ್ಕೆ ಬರದ ಹಾಗೆ ಕಾಪಾಡುತ್ತದೆ. ಅದು ನಿರ್ದೇಶಕನ ಜವಾಬ್ದಾರಿಯು ಹಾಗಿದ್ದರಿಂದ ಕೆಲವು ಬದಲಾವಣೆಗಳೊಂದಿಗೆ ಚಿತ್ರ ಯಶಸ್ವಿಯಾಗಿ ತೆಲುಗು ಭಾಷೆಗೂ ಕೂಡ ರೀಮೇಕ್ ಹೊಂದಿದ್ದು ಅದರ ಯಶಸ್ಸು ತೋರಿಸುತ್ತದೆ.

"ಭುಜಂಗಯ್ಯನ ದಶಾವತಾರಗಳು" ಎಂಬ ಕಾದಂಬರಿಯು "ಆಧುನಿಕತೆಯ ಪ್ರವೇಶದ ನಂತರ ಸಮಾಜದಲ್ಲಾಗುವ ಪರಿವರ್ತನೆಗಳನ್ನು ಸವಿಸ್ತಾರವಾಗಿ ಚಿತ್ರಿಸುತ್ತದೆ. ವ್ಯಕ್ತಿ, ಸಮಾಜ, ನೈತಿಕತೆಗಳ ನಡುವಿನ ಸಂಬಂಧವನ್ನು ಆಧುನಿಕತೆಯ ಪ್ರವೇಶದ ಹಿನ್ನೆಲೆಯಲ್ಲಿ ಪರೀಕ್ಷಿಸುತ್ತದೆ. ಹೊಸದನ್ನು ಸ್ವೀಕರಿಸುವ ಆದರೆ ನೈತಿಕತೆಯ ಎಚ್ಚರವನ್ನು ಕಳೆದುಕೊಳ್ಳದೇ ಹೊಸದನ್ನು ನಿಭಾಯಿಸುವ ಭುಜಂಗಯ್ಯ ಹಲವು ಸಂದಿಗ್ಧತೆಗಳನ್ನು ಪ್ರತಿನಿಧಿಸುತ್ತಾನೆ. ಭುಜಂಗಯ್ಯನು ಹೊಸ ಅವಕಾಶಗಳನ್ನು ಕಂಡುಕೊಳ್ಳುವ ಬಗೆಗಳನ್ನು, ಅವನ ಸಾಹಸಿ ಪ್ರವೃತ್ತಿಗಳನ್ನು ಸೂಚಿಸುವ ಪಠ್ಯ ಇದಾಗಿದೆ".[5] ಈ ಕಾದಂಬರಿಯ ಮುಖ್ಯಚಲನೆ ನಡೆಯುವುದು ಭುಜಂಗಯ್ಯನ ಹೊಸ ಆವಿಷ್ಕಾರ ಕಾರ್ಯದ ಬಗ್ಗೆ. ಒಂದೊಂದು ಕೆಲಸದಲ್ಲೂ ಯಶಸ್ವಿಯಾಗುವ ಭುಜಂಗಯ್ಯ ಮತ್ತೆ ಆಧುನಿಕತೆಯಿಂದಾಗಿ ದುರಂತಕ್ಕೆ ಕಾರಣನಾಗುತ್ತಾನೆ. ಉದಾಹರಣೆಗೆ:- ಹೋಟೆಲ್ಲು, ಬಾವಿ ತೋಡಿಸುವುದು ಇತ್ಯಾದಿ ಹಲವಾರು ಸಂದಿಗ್ಧತೆಯಲ್ಲಿ ತೊಳಲಾಡುವ ಭುಜಂಗಯ್ಯನ ಚಿತ್ರಣ ಕಾದಂಬರಿಯ ಉದ್ದಕ್ಕೂ ಕಾಣಬಹುದು. ಜಾತ್ಯಾತೀತ ಮನೋಭಾವ ಹೊಂದಿರುವ ಗಾಂಧಿ ಆದರ್ಶಗಳನ್ನು ಒಪ್ಪಿಕೊಳ್ಳುವ ಮೂಲಕ ಭಿನ್ನನಾಗುತ್ತಾನೆ. ಆದರೆ ಇಡಿ ಕಾದಂಬರಿಯಲ್ಲಿ ಉಂಟಾಗುವ ಸಾಂಪ್ರದಾಯಿಕ ಸಮಾಜದ ಆಗುಹೋಗುಗಳು ಮಾನವಲೋಕದ ದುರಂತಕ್ಕೆ ಕಾರಣವಾಗುತ್ತದೆ.

'ಭುಜಂಗಯ್ಯನ ದಶಾವತಾರಗಳು' ಕಾದಂಬರಿ ಅತ್ಯಂತ ಅರ್ಥವತ್ತಾದ, ವಿಶಾಲ ವಿವರಗಳನ್ನು ಒಳಗೊಂಡ ಕಾದಂಬರಿ. ಕಾದಂಬರಿಯ ನಾಯಕ ಭುಜಂಗಯ್ಯ ಹಲವಾರು ಕಲೆಗಳನ್ನು ಸಿದ್ಧಿಸಿಕೊಂಡಿರುವನು. ಅಂತಹ ಕಲೆಗಳ ಮುಖಾಂತರ ಅತ್ಯಂತ ಪ್ರಭಾವಶಾಲಿಯಾಗಿ ಬೆಳೆದ ವ್ಯಕ್ತಿಯಾಗುತ್ತಾನೆ. ತಾನು ಅವತರಿಸುವ ಪ್ರತಿಯೊಂದು ಅವತಾರಗಳಲ್ಲೂ ಮೊದಲು ಯಶಸ್ಸು ಬಂದು ಅಂತ್ಯದಲ್ಲಿ ದುರಂತಕ್ಕೆ ಒಳಗಾಗುವಂತಹ ರೀತಿ ಶೋಚನೀಯ. ಇಂತಹ ಸಾಹಸಿ ಪ್ರವೃತ್ತಿಗಳನ್ನು

ನಿರ್ವಹಿಸುವ ಕಾದಂಬರಿಯ ನಾಯಕನನ್ನು ಒಳಗೊಂಡ ಕಥಾ ಹಂದರದ 'ಭುಜಂಗಯ್ಯನ ದಶಾವತಾರಗಳು' ಕಾದಂಬರಿ ಸಾಹಿತ್ಯಕೃತಿಯಾಗಿ ಅತ್ಯಂತ ಯಶಸ್ಸನ್ನು ಪಡೆದಿದೆ. ಅಂತಹ ಸಾಹಿತ್ಯ ಕೃತಿ ಸಿನಿಮಾ ರೂಪವಾಗಿಯು ಜನರ ಮನಗೆದ್ದಿರುವುದು ಪ್ರಶಂಸನೀಯ ವಿಚಾರವಾಗಿದೆ. 478 ಪುಟಗಳುಳ್ಳ ಕಾದಂಬರಿಯನ್ನು ಸಿನಿಮಾ ಮಾಡಲು ನಿರ್ದೇಶಕರಾದ ಲೋಕೇಶ್‌ರವರಿಗೆ ನಿಜಕ್ಕೂ ಸವಾಲಿನ ಕಾರ್ಯವೇ ಆದರೂ ಅದರಲ್ಲಿ ಯಶಸ್ವಿಯಾಗಿರುವುದು ಅವರ ಸಾಮರ್ಥ್ಯವನ್ನು ಸೂಚಿಸುತ್ತದೆ. ಕಾದಂಬರಿಯ ಹಲವಾರು ಸನ್ನಿವೇಶ. ದೃಶ್ಯಗಳನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಕಟ್ಟಿಕೊಡುವ ಪ್ರಯತ್ನ ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

ಕಾದಂಬರಿಯಲ್ಲಿ ಕಂಡುಬರುವ ಹಲವಾರು ಪಾತ್ರಗಳನ್ನು ಹಾಗೆಯೇ ಪುನರ್ ನಿರ್ಮಿಸಿಕೊಡುವಲ್ಲಿ ಲೋಕೇಶ್ ಸಫಲರಾಗಿದ್ದಾರೆ. ಹಾಗೆಯೇ ಹಲವಾರು ಬದಲಾವಣೆಗಳ ಮೂಲಕ ಸಿನಿಮಾವನ್ನು ಕಟ್ಟಿಕೊಡುತ್ತಾರೆ. ಕಾದಂಬರಿಯ ಆರಂಭದಲ್ಲಿ ಮಳೆ ಬರದೆ ಇಡಿ ಹಳ್ಳಿಯ ಜನ ಸಮಸ್ಯೆಗೆ ಒಳಗಾಗಿ ಪರದಾಡುವ. ಮಳೆಗೋಸ್ಕರ ಕಾಯುವ. ತಮ್ಮ ಜಮೀನನ್ನು ಒಪ್ಪ ಮಾಡುವ ಕಾರ್ಯದಲ್ಲಿ ತೊಡಗಿರುತ್ತಾರೆ. ಜೊತೆಗೆ ದೇವರಿಗೆ 'ಪರ' ಮಾಡಿ ಮಳೆಯ ನಿರೀಕ್ಷೆಯಲ್ಲಿರುತ್ತಾರೆ. ಅಂತಹ ಸನ್ನಿವೇಶಗಳನ್ನು ಚಲನಚಿತ್ರದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ 'ಬರ'ದ ಚಿತ್ರಣವನ್ನು ನಿರ್ದೇಶಕರು ನೀಡುತ್ತಾರೆ. ಆದರೆ ಕಾದಂಬರಿಯಲ್ಲಿ ಬರದ ಮಟ್ಟಿಗೆ ಜನರ ಜೀವನ ಸ್ಥಿತಿ ತಲುಪಿರುವುದಿಲ್ಲ. ಮಧ್ಯದಲ್ಲಿ ಬರುವ ಬರವನ್ನು ಮೊದಲೆ ಚಿತ್ರಿಸುತ್ತಾರೆ. ಊರು ಬಿಟ್ಟು ಹೋಗುವ. ಹಸಿವಿನಿಂದ ಸಾಯುವ. ಚಿತ್ರಣಗಳಂತೂ ನೋಡುಗರಲ್ಲಿ ಅನುಕಂಪದ ಭಾವ ಹುಟ್ಟಿಸುತ್ತವೆ. ಆದರೆ ಇಲ್ಲಿ ಸಿನಿಮಾ ಭಾಷೆಗೆ ಬೇಕಾದಂತಹ ನಿರೂಪಣ ಕ್ರಮದಿಂದ ಈ ರೀತಿಯ ಬದಲಾವಣೆಗೆ ನಿರ್ದೇಶಕರು ಒಪ್ಪಿಕೊಂಡಿದ್ದಾರೆ. ಅಂತಹ ಸಂದರ್ಭದಲ್ಲಿಯೇ ಭುಜಂಗಯ್ಯನಿಗೆ ತಾನು ಮಾಡುವ ವ್ಯವಸಾಯ ಆರಕ್ಕೇರದೆ ಮೂರಕ್ಕೆ ಇಳಿಯದೇ ಇರುವುದನ್ನು ಮನಗಂಡು ನಾನು ಬೇರೇನಾದರು ಮಾಡಬೇಕೆಂಬುವ ಹಂಬಲ ಮನಸ್ಸಿನಲ್ಲಿ ಮೂಡಿ ಹೋಟೆಲ್ಲಿನ ಹೊಸ ಆವಿಷ್ಕಾರಕ್ಕೆ ತೊಡಗುವುದು ಕಾದಂಬರಿಯಲ್ಲಿ ಚಿತ್ರಣವಾದರೆ. ಸಿನಿಮಾದಲ್ಲಿ ಮಾದಳ್ಳಿಯ ಮೇಲೆ ಓಡಾಡುವ ಬಸ್ಸಿನ ಡ್ರೈವರ್ ವಿಕ್ಟರಿಯ ಮಾತಿಗೆ ಪ್ರೇರಣೆಗೊಂಡು ಹೋಟೆಲ್ ಇಡುವುದನ್ನು ಚಿತ್ರಿಸಿಕೊಳ್ಳುತ್ತಾರೆ.

ಭುಜಂಗಯ್ಯನ ದಶಾವತಾರಗಳು ಕಾದಂಬರಿಯ ರೂಪಾಂತರ ಸಿನಿಮಾದಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ ಕಾದಂಬರಿಯಲ್ಲಿ ಬರುವ ಶೇಂದಿ ಅಂಗಡಿಯ ಅಜ್ಜಪ್ಪ ಚಲನಚಿತ್ರದಲ್ಲಿ ಕಂಡುಬರುವುದಿಲ್ಲ. ಭುಜಂಗಯ್ಯನಿಗೆ ಎಲ್ಲ ರೀತಿಯಲ್ಲೂ ಸಹಾಯ. ಸಲಹೆಗಳುನ್ನು ನೀಡುತ್ತಿದ್ದ ಆ ಪಾತ್ರವನ್ನು ನಿರ್ದೇಶಕರು ಬದಲಾವಣೆ ಮಾಡಿಕೊಂಡಿದ್ದಾರೆ. ಬದಲಿಗೆ ಕರೀಗೌಡರನ್ನು

ಮತ್ತು ಅವರ ತಮ್ಮ ಮುದ್ದೇಗೌಡರನ್ನು ಚಲನಚಿತ್ರದಲ್ಲಿ ಆತ್ಮೀಯರಂತೆ ಚಿತ್ರಿಸಿಕೊಂಡಿದ್ದಾರೆ. ಇದು ಹಲವಾರು ಪಾತ್ರಗಳನ್ನು ನಿರ್ವಹಿಸಲು ಕಷ್ಟಸಾಧ್ಯ. ಹಾಗಾಗಿ ಇರುವ ಪಾತ್ರಗಳಲ್ಲೇ ಬೇಕಾದ ಪಾತ್ರವನ್ನು ಸೃಷ್ಟಿಸುವ ಪ್ರಯತ್ನ ಮಾಡಿದ್ದಾರೆ. ಹುಂಡಿ ಗ್ರಾಮದಲ್ಲಿರುವ ಮುದ್ದೇಗೌಡರು ಮಾದಳ್ಳಿಯಲ್ಲಿಯೇ ಇರುವ ಹಾಗೆ ಬದಲಾಯಿಸಿಕೊಂಡಿದ್ದಾರೆ. ಇದು ಪರಿಣಾಮಕಾರಿಯಾಗಿ ಕೂಡ ಚಿತ್ರಿತವಾಗಿದೆ.

ಕಾದಂಬರಿಯಲ್ಲಿ ಬರುವ ಭುಜಂಗಯ್ಯನ ಹೆಂಡತಿಯ ಪಾತ್ರ ಸ್ವಲ್ಪ ಕಠೋರತೆಯ ಮಾತಿನವಳಾದರು. ಅಂತಃಕರಣದಲ್ಲಿ ಅತ್ಯಂತ ಪ್ರಶಾಂತ ಮನಸ್ಸಿನವಳ ಹಾಗೆ ಚಿತ್ರಿಸಿದ್ದಾರೆ. ತನ್ನ ತವರು ಮನೆಯಲ್ಲಿ ಆರ್ಥಿಕವಾಗಿ ಸದೃಢರಿದರಿಂದ ಅವಳಿಗೆ ಈ ರೀತಿಯ ಮನೋಭಾವ ಬೆಳೆದಿದೆ ಎಂದು ವಿಶ್ಲೇಷಿಸುತ್ತಾರೆ. ಗಂಡನೆಂದರೆ ಪ್ರೀತಿ, ನಂಬಿಕೆ, ವಿಶ್ವಾಸ, ಮಮತೆ ಇರುವ ಹೆಂಡತಿಯಾಗಿ ರೂಪಗೊಂಡ ಚಿತ್ರಣ ಕಾದಂಬರಿಯಲ್ಲಿದ್ದರೆ, ಸಿನಿಮಾದಲ್ಲಿ ಗಯ್ಯಾಳಿ ರೂಪದ, ಪ್ರೀತಿ, ಅಂತಃಕರಣವಿಲ್ಲದವಳ ಹಾಗೆ ನಕಾರಾತ್ಮಕವಾಗಿ ಚಿತ್ರಿಸಿದ್ದಾರೆ. ಆದರೆ ಅದಕ್ಕೆ ತುಂಬಾ ವಿಶಿಷ್ಟವಾದ ಅರ್ಥವಿರುವುದನ್ನು ಕಾಣುತ್ತೇವೆ. ಗಂಡನ ಮೇಲೆ ರೇಗುವ, ತನಗೆ ತೊಂದರೆಯಾದಾಗ ಪ್ರತಿಭಟಿಸುವ ಎಲ್ಲ ಲಕ್ಷಣಗಳನ್ನೊಳಗೊಂಡ ಗಟ್ಟಿಗಿತ್ತಿಯ ಪಾತ್ರವಾಗಿ ಸಿನಿಮಾದಲ್ಲಿ ಚಿತ್ರಿಸಲಾಗಿದೆ. ಸುಶೀಲಳ ಪಾತ್ರವನ್ನು ತಾಳ್ಮೆಯ ಸಹನೆಯ ಮೂರ್ತಿಯಾಗಿ ಚಿತ್ರಿಸಿದ್ದಾರೆ. ಪಾರ್ವತಿಯ ಪಾತ್ರ ಸ್ವಲ್ಪ ಗಟ್ಟಿಯಾಗಿದ್ದ ಸಂದರ್ಭದಲ್ಲಿ ಸುಶೀಲಳ ಪಾತ್ರವನ್ನು ಪರಿಣಾಮಕಾರಿಯಾಗಿ ಚಿತ್ರಿಸಬೇಕಾಗಿರುವ ಕಾರಣಕ್ಕೆ ಪ್ರೇಕ್ಷಕರಿಗೆ ಎರಡು ಪಾತ್ರಗಳನ್ನು ತೌಲನಿಕವಾಗಿ ನೋಡುವ ಅನಿವಾರ್ಯತೆ ಸೃಷ್ಟಿಸುವ ಕ್ರಮದ ನಿರೂಪಣೆ ನಿರ್ದೇಶಕರದ್ದಾಗಿದೆ. ಹಾಗಾಗಿ ಎರಡು ಪಾತ್ರಗಳನ್ನು ಭಿನ್ನವಾಗಿ ಚಿತ್ರಿಸಿದ್ದಾರೆ. ಮನುಷ್ಯನ ಕಾಮ, ಕ್ರೋಧ, ಮೋಹ, ಮದ, ಮತ್ಸರವನ್ನು ಕುರಿತಾದ ಜಿಜ್ಞಾಸೆ ಬಂದು ಹಾಡಿನ ಮೂಲಕ ಅತ್ಯಂತ ಪರಿಣಾಮಕಾರಿಯಾಗಿ ಸಿನಿಮಾದಲ್ಲಿ ಚಿತ್ರಿಸಿದ್ದಾರೆ. ಶಾನುಭೋಗರ ಹೆಣ್ಣಿನ ಮೋಹ, ರುದ್ರಪ್ಪನ ಹಣದ ಮೋಹ ಇನ್ನಿತರ ಮತ್ಸರಗಳನ್ನು ಹಾಡು ಸೂಕ್ಷ್ಮವಾಗಿ ಹೇಳುವ ಪ್ರಯತ್ನ ಸಾಕಾರಗೊಂಡಿದೆ.

ಕಾದಂಬರಿಯ ಕೇಂದ್ರಬಿಂದು ಭುಜಂಗಯ್ಯನ ಹಲವಾರು ಅವತಾರಗಳು ಅತ್ಯಂತ ನಾಜೂಕಾಗಿ ವರ್ಣಿತವಾಗಿವೆ. ಭುಜಂಗಯ್ಯ ಒಂದು ಕೆಲಸ, ಕಾರ್ಯಕ್ಕೆ ಸೀಮಿತವಾಗಿರಲಿಲ್ಲ. ಹಲವಾರು ಹವ್ಯಾಸ, ಕಲೆಗಳನ್ನು ರೂಢಿಸಿಕೊಂಡಿದ್ದ ವ್ಯಕ್ತಿಯಾಗಿದ್ದರು. ವ್ಯವಸಾಯ, ಹೋಟೆಲ್, ಈಚಲು ಗರಿಯಿಂದ ಮಂಕರಿ ಎಣೆಯುವುದು, ಬಾವಿಯಲ್ಲಿ ಮುಳುಗಿದ ಬಿಂದಿಗೆಗಳನ್ನು ತೆಗೆಯುವುದು, ಬಾವಿ ತೋಡಿಸುವುದು, ಮಳೆಗಾಗಿ ಪರ ಮಾಡುವುದು, ಕಾರ್ಯಕ್ರಮಗಳಿಗೆ ಅಡುಗೆ ಮಾಡುವುದು, ಹಾವಿನ ಕಡಿತಕ್ಕೆ ಮಂತ್ರಹಾಕಿ ಔಷಧಿ ನೀಡುವುದು, ಕೆರೆಯ ಕಂಟ್ರಾಕ್ಟ್ ಮಾಡುವುದು, ಅಂಗಡಿ ವ್ಯಾಪಾರ, ಹಗ್ಗ ಹೊಸೆಯುವುದು, ಮಕ್ಕಳಿಗೆ ಬುಗುರಿ ಮಾಡಿಕೊಟ್ಟು ತಾನು ಆಡುವುದು. ಹೀಗೆ ಅನಂತ ಅವತಾರಗಳಲ್ಲಿ ಭುಜಂಗಯ್ಯ

ತೊಡಗಿರುವುದನ್ನು ಕಾದಂಬರಿಯುದ್ದಕ್ಕೂ ಚಿತ್ರಿಸಲಾಗಿದೆ. ಆದರೆ ಸಿನಿಮಾದಲ್ಲಿ ಭುಜಂಗಯ್ಯನ ಈ ಎಲ್ಲಾ ರೀತಿಯ ಅವತಾರಗಳನ್ನು ಚಿತ್ರಿಸಲು ಸಾಧ್ಯವಾಗಿಲ್ಲ. ಕಾರಣ ಸಮಯ. ಚಿತ್ರಕಥೆಗೆ ಪೂರಕವಾದ ದೃಶ್ಯಗಳನ್ನು ನಿರ್ಮಾಣ ಮಾಡುವುದು ಅಷ್ಟು ಸುಲಭವಾಗಿರಲಿಲ್ಲ. ಹಾಗಾಗಿ ಕೆಲವು ಮುಖ್ಯ ಅವತಾರಗಳನ್ನು ಮಾತ್ರ ಚಿತ್ರಿಸಿದ್ದಾರೆ. ಭುಜಂಗಯ್ಯ ಯಾವುದೇ ಸಂದರ್ಭದಲ್ಲೂ ಜಡವಾಗದೇ ಚಲನಶೀಲವಾಗಿರಲು ಈ ರೀತಿಯಾದ ಕಾರ್ಯಗಳನ್ನು ಮಾಡುತ್ತಿದ್ದರು. ಚಲನಚಿತ್ರ ನಿರೂಪಣೆಯಲ್ಲಿ ಸಿನಿಮಾದ ಭಾಷೆಗೆ ಅನುಗುಣವಾಗಿ ಮುಖ್ಯವೆನಿಸುವಂತಹ ಪರಿಕಲ್ಪನೆಗಳನ್ನು ಚಿತ್ರಿಸುವ ಪ್ರಯತ್ನ ನಿರ್ದೇಶಕರದ್ದಾಗಿದೆ.

ಕಾದಂಬರಿಯಲ್ಲಿ ಇರದ ಹಲವಾರು ಹೊಸ ಸೇರ್ಪಡೆಗಳು ಸಿನಿಮಾದ ಬೆಳವಣಿಗೆಗೆ ಪೂರಕವಾಗಿ ನಿರ್ದೇಶಕರು ಚಿತ್ರಿಸಿಕೊಂಡಿದ್ದಾರೆ. ಮೊದಲನೆಯದು ಕೆಲವು ಪಾತ್ರಗಳನ್ನು ಸೃಷ್ಟಿ ಮಾಡದೆ ಇರುವಂತಹ ಪಾತ್ರಗಳಲ್ಲಿ ಸರಿದೂಗಿಸಿಕೊಂಡಿದ್ದಾರೆ. ಉದಾ: ಅಜ್ಜಪ್ಪ, ಹೊಟೆಲ್ಲಿನ ಕೆಲಸಗಾರನಾಗಿರುವ ಶಿವ ತನ್ನ ಮನೆಯಲ್ಲಿ ಜೀತಕ್ಕಿರುವ ಅಮಾಸೆ ಈ ಪಾತ್ರಗಳಾವುದು ಚಿತ್ರದಲ್ಲಿ ಬರುವುದಿಲ್ಲ. ಅದಕ್ಕೆ ಕಾರಣ ಸಿನಿಮಾದ ಸಮಯ ಮತ್ತು ಸಿನಿಮಾದ ಮಿತಿ. ಇಷ್ಟು ಅಡಿಗಳ ರೀಲನ್ನು ಸಿನಿಮಾ ತಯಾರಾಗಲೇಬೇಕು. ಇಷ್ಟೇ ಖರ್ಚಾಗಬೇಕೆಂಬ ಕೆಲವು ಹಣಕಾಸಿನ ಕಾರಣಕ್ಕೆ ಇಂತಹ ಹಲವು ಪಾತ್ರ ಸನ್ನಿವೇಶಗಳನ್ನು ಸಾರಸಗಟಾಗಿ ಕೈಬಿಟ್ಟು ಬೇರೆ ಪಾತ್ರಗಳ ಸನ್ನಿವೇಶಗಳನ್ನು ಸರಿತೂಗಿಸಿಕೊಂಡು ಹೋಗಿದ್ದಾರೆ.

ಸಿನಿಮಾದ ನಾಯಕ ಭುಜಂಗಯ್ಯ ಯಾವುದಾದರು ಹೊಸ ಆಲೋಚನೆ, ವಿಚಾರಗಳು ಹೊಳೆದಾಗ ಮೇಲೆ ನೋಡುತ್ತಾ "ಯ್ಯೋ ನೀನು ಇದ್ದೀಯಲ್ಲ" ಎಂದು ಉಚ್ಛರಿಸುವ ಶಬ್ದವಂತು ಸಿನಿಮಾದ ತುಂಬಾ ಪರಿಣಾಮಕಾರಿಯಾಗಿ ಮೂಡಿ ಬಂದಿರುವುದು ನಿರ್ದೇಶಕರ ಕ್ರಿಯಾಶೀಲತೆಯನ್ನು ತೋರಿಸುತ್ತದೆ. ಈ ರೀತಿಯಾದ ಅಂಶ ಕಾದಂಬರಿಯಲ್ಲಿ ಕಂಡುಬರುವುದಿಲ್ಲ. ಆದರೆ ಚಲನಚಿತ್ರದಲ್ಲಿ ಆಕರ್ಷಕವಾಗಿ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಹಾಗೆಯೇ ಭುಜಂಗಯ್ಯ ಹೋಟೆಲ್ಲು ಇಟ್ಟಂತಹ ಸಂದರ್ಭದಲ್ಲಿ ಬಡವರಿಗಾಗಿ "ಗಂಜಿಚಪ್ಪರ"ವನ್ನೂ ಹಾಕಿ ತನ್ನಲ್ಲಿರುವುದನ್ನು ಇಲ್ಲದವರಿಗೆ ಕೊಟ್ಟು ಸಹಾಯ ಮಾಡುವ ಔದಾರ್ಯತೆಯನ್ನು ತೋರುತ್ತಾನೆ. ಇದು ಕಾದಂಬರಿಯಲ್ಲಿ ಇಲ್ಲದ ಸನ್ನಿವೇಶವಾದರು ಪರಿಣಾಮಕಾರಿಯಾಗಿ ಮೂಡಿಬಂದಿದೆ. ಈ ರೀತಿಯ ಭುಜಂಗಯ್ಯನ್ನು ಔದಾರ್ಯದ ಕೆಲಸಗಳು ಸಿನಿಮಾದ ತುಂಬೆಲ್ಲ ಕಾಣುತ್ತಿರುತ್ತವೆ. ಇವು ಸಿನಿಮಾದ ನಾಯಕನನ್ನು ಉದಾತ್ತೀಕರಿಸುವ ಕ್ರಿಯೆಯಾಗಿದೆ. ನಾಯಕನ ವಿಜೃಂಭಣೆ ಸಿನಿಮಾದ ಒಂದು ಭಾಗವಾದ್ದರಿಂದ ಈ ರೀತಿಯ ಮಾನವೀಯ ಮೌಲ್ಯಗಳು ಚಲನಚಿತ್ರದ ಮೂಲಕ ಪ್ರಭಾವವನ್ನು ಬೀರುತ್ತವೆ.

ಚಲನಚಿತ್ರದಲ್ಲಿ ಹಲವಾರು ಅಂಶಗಳನ್ನು ಕೈಬಿಡಲಾಗಿದೆ. ಮುದ್ದೆಗೌಡರ ಮಗ ರಾಜುವಿನ ವಿಚಾರ, ಭುಜಂಗಯ್ಯ ಹೊಸ ಜಮೀನಿನ ತೋಟ ಮಾಡುವ ವಿಚಾರ. ಹೊಟೆಲ್ಲಿನಲ್ಲಿ ಇಸ್ಪೀಟ್ ಆಡುವುದು ಗೆಳೆಯರೊಡನೆ ಹರಟುವುದು ಹೀಗೆ ನಾನಾ ವಿಚಾರಗಳನ್ನು ಕೈಬಿಟ್ಟು ಸಿನಿಮಾವನ್ನು ಅತ್ಯಂತ ಪರಿಣಾಮಕಾರಿಯಾಗಿ ಯಶಸ್ವಿಯಾಗಿಸಿದ್ದಾರೆ. ಚಲನಚಿತ್ರದ ಕಡೆಯ ಸಂದರ್ಭದಲ್ಲಿ ಹೊಸ ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ. ಭುಜಂಗಯ್ಯನಿಗೆ ಸಿಡಿಮದ್ದು ಸಿಡಿದು ಕಣ್ಣು ಕಳೆದುಕೊಂಡು ಮನೆಯಲ್ಲಿರ ಬೇಕಾದರೆ ಸುಶೀಲಳ ಮತ್ತೆ ಬಳೆ ವ್ಯಾಪಾರ ಶುರು ಮಾಡಿ ಜೀವನವನ್ನು ನಡೆಸುತ್ತಿರುತ್ತಾಳೆ. ಕರಿಗೌಡನ ಮಗ ನಾರಾಯಣ ಸುಶೀಲಳ ಮೇಲೆ ಕಣ್ಣಾಕಿದ್ದು ಅವಕಾಶಕ್ಕಾಗಿ ಕಾದು ಕುಳತಿದ್ದು ಸುಶೀಲಳನ್ನು ಒಮ್ಮೆ ಸಂಜೆ ವ್ಯಾಪಾರದಿಂದ ಬರುವಾಗ ಅತ್ಯಾಚಾರ ಎಸಗುತ್ತಾನೆ. ಮನೆಗೆ ಬಂದ ಸುಶೀಲ ತನಗಾದ ಅನ್ಯಾಯವನ್ನು ಗಂಡನಲ್ಲಿ ಹೇಳಕೊಳ್ಳುತ್ತಾಳೆ. ಭುಜಂಗಯ್ಯ ಅವಳನ್ನು ಸಂತೈಸಿಸಿ ನಾಳೆಯಿಂದ ವ್ಯಾಪಾರಕ್ಕೆ ಹೋಗದ ಹಾಗೆ ತಾಕೀಟು ಮಾಡಿ ತಾನೇ ಭಿಕ್ಷೆ ಬೇಡಲು ತೊಡಗುತ್ತಾನೆ. ಯಾರು ಏನೇ ಹೇಳದರು ಕೇಳದೆ ಅದು ಒಂದು ಕಾಯಕವೆ ಎಂದು ತಿಳದು ಮುಂದುವರಿಸುತ್ತಾನೆ. ನಾರಾಯಣನಿಗೆ ಹಾವು ಕಚ್ಚಿದ ಸಂದರ್ಭದಲ್ಲಿ ಅವನಿಗೆ ಶುಶ್ರೂಷೆ ಮಾಡಿ ಬದುಕಿಸಿ ತಾನು ಪ್ರಾಣವನ್ನು ಕಳೆದುಕೊಳ್ಳುತ್ತಾನೆ. ಎಲ್ಲರು ದುಃಖದಿಂದ ಗೋಳಾಡುತ್ತಾರೆ. ಸುಶೀಲಳು ಅತ್ಯಂತ ನೋವಿನಿಂದ ಭುಜಂಗಯ್ಯನನ್ನು ತಬ್ಬಿಕೊಳ್ಳುತ್ತಾಳೆ ಹೀಗೆ ಕಾದಂಬರಿ ಅಂತ್ಯವಾಗುತ್ತದೆ.

ಸಿನಿಮಾದಲ್ಲಿ ಈ ರೀತಿಯ ಸನ್ನಿವೇಶಗಳನ್ನು ನಿರ್ದೇಶಕ ಬೇರೆಯದೇ ರೀತಿಯಲ್ಲಿ ವಿಶ್ಲೇಷಿಸಿ ಚಿತ್ರಿಸಿದ್ದಾರೆ. ಸುಶೀಲಳನ್ನು ಅತ್ಯಾಚಾರ ಮಾಡಿದ ಬಳಿಕ ನಾರಾಯಣನಿಗೆ ಹಾವು ಕಚ್ಚುತ್ತದೆ. ಭುಜಂಗಯ್ಯ ಹೋಗಿ ಹಾವಿನ ವಿಷವನ್ನು ತೆಗೆದು ಅವನಿಗೆ ಜೀವದಾನ ನೀಡಿ ತಾನು ಪ್ರಾಣವನ್ನು ಕಳೆದುಕೊಳ್ಳುತ್ತಾನೆ. ಇತ್ತ ಸುಶೀಲಳು ಅತ್ಯಾಚಾರಕ್ಕೊಳಗಾದ ನಂತರ ನೋವಿನಿಂದ ಪತ್ರ 'ಬರೆದಿಟ್ಟು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಮುದ್ದೇಗೌಡರು ಪತ್ರ ನೋಡಿ ಬಂದು ಭುಜಂಗಯ್ಯನ ಶುಶ್ರೂಷೆ ಮಾಡುತ್ತಿರುವ ಸಂದರ್ಭದಲ್ಲಿ ಆ ವಿಚಾರವನ್ನು ತಿಳಸಿ ಅವನಿಗೆ ಸಹಾಯ ಮಾಡಬೇಡ ಅವನು ಸಾಯಲಿ ಎಂದು ಹೇಳದರು. ಮಾನವೀಯತೆ ಗುಣದಿಂದ ಅವನನ್ನು ರಕ್ಷಿಸಿ ತಾನು ಪ್ರಾಣ ಬಿಡುತ್ತಾನೆ. ಕೊನೆಗೆ ಇಬ್ಬರನ್ನು ಒಟ್ಟಿಗೆ ಮಣ್ಣು ಮಾಡುತ್ತಾರೆ. ಹೀಗೆ ಸಿನಿಮಾದಲ್ಲಿ ಬದಲಾಣೆ ಮಾಡಿಕೊಂಡಿದ್ದಾರೆ. ಇಲ್ಲಿ ನಿಜಕ್ಕೂ ಈ ರೀತಿಯ ಬದಲಾವಣೆಯನ್ನು ಮಾಡಿಕೊಂಡು ನಿರ್ದೇಶಕರು ಯಶಸ್ವಿಯಾಗುತ್ತಾರೆ.

ಮುಖ್ಯವಾಗಿ ಬದಲಾವಣೆಗಳಗೆ ಕಾರಣ ಹುಡುಕಿದರೆ ಪ್ರತಿಹಂತದ ಬದಲಾವಣೆಯಲ್ಲು ವಿಭಿನ್ನವಾದ ಅರ್ಥ ಸಾಧ್ಯತೆಗಳು ಕಾಣುತ್ತವೆ. ಅತ್ಯಾಚಾರಕ್ಕೆ ಒಳಗಾದ ಹೆಣ್ಣು ಆತ್ಮಹತ್ಯೆ ಮಾಡಿಕೊಳ್ಳುವ ರೀತಿ ಚಿತ್ರಿತವಾಗಿದೆ. ಸಿನಿಮಾದಲ್ಲಿ ತಾನು ಕೆಟ್ಟುಹೋದರೆ ಬದುಕಲು ಅನರ್ಹಳು ಎಂಬಂತಹ ಅರ್ಥವನ್ನು

ಅದು ಸೂಚಿಸುತ್ತದೆ. ಮತ್ತೊಂದು ಅರ್ಥದಲ್ಲಿ ಗಂಡನಿಗೆ ಸಾವು ಸಮೀಪಿಸುತ್ತಿದೆ. ಏನೋ ಅಪಾಯ ಎದುರಾಗುತ್ತಿದೆ ಎಂಬುದು ಕಾದಂಬರಿಯಲ್ಲಿ ಸುಶೀಲಳಿಗೆ ಅನ್ನಿಸುತ್ತಿದ್ದನ್ನು ಈ ರೀತಿ ಮಾರ್ಪಾಡಿಸಿ ತನ್ನ ಗಂಡ ಸತ್ತ ನಂತರ ತಾನು ಬದುಕಿರಬಾರದೆಂಬ ನೀತಿ ಮೂಡುವಂತೆ ಮಾಡುತ್ತದೆ. ಮೊದಲ ಹೆಂಡತಿಯ ಅನಾದರವನ್ನು ಎರಡನೆ ಹೆಂಡತಿಯನ್ನು ಪ್ರೀತಿಯನ್ನು ಸಹಬಾಳ್ವೆಯನ್ನು ತೋರಿಸುತ್ತದೆ. ಒಟ್ಟಾರೆಯಾಗಿ, ಚಲನಚಿತ್ರ ಕೆಲವು ಏರುಪೇರುಗಳಲ್ಲಿಯು ವಿಶಿಷ್ಟವಾದ ನಿರೂಪಣಾಕ್ರಮ ವಿಭಿನ್ನ ರೂಪಾಂತರದಲ್ಲಿ ಕಾದಂಬರಿಗೆ ಯಾವುದೇ ರೀತಿಯಲ್ಲಿ ಚ್ಯುತಿ ಬರದ ಹಾಗೆ ನಿರ್ದೇಶಕರಾದ ಲೋಕೇಶ್‌ರವರು ನಿರ್ವಹಿಸಿ ಚಲನಚಿತ್ರವನ್ನು ಪೂರ್ಣ ಪ್ರಮಾಣದಲ್ಲಿ ಸೃಷ್ಟಿಸಿದ್ದಾರೆ.

ಸಾಹಿತ್ಯ ಕೃತಿಯೊಂದರ ಆಧಾರಿತ ಸಿನಿಮಾ ಎಂದಾಗ ಹಲವಾರು ಬದಲಾವಣೆಗಳು ಅತ್ಯಂತ ಅವಶ್ಯಕವಾಗಿರುತ್ತದೆ. ಪ್ರತಿಯೊಂದು ವಿಚಾರಗಳನ್ನು ಬೇರೆ ಬೇರೆ ರೀತಿಯಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಮುಖ್ಯವಾಗಿ ಸಮಯದ ಹೊಂದಾಣಿಕೆಯ ನಿರೂಪಣೆ ನಿರ್ದೇಶಕರಿಗೆ ಹೆಚ್ಚು ಜವಾಬ್ದಾರಿಯುತ ಕಾರ್ಯವಾಗುತ್ತದೆ. ಸಿನಿಮಾದ ಅವಧಿ ಜಾಸ್ತಿಯಾದಂತೆ ಪ್ರೇಕ್ಷಕರಲ್ಲಿ 'ಬೇಜಾರು' ಉಂಟಾಗುವ ಸಾಧ್ಯತೆ ಇರುವುದರಿಂದ ಕಾದಂಬರಿಯಲ್ಲಿ ಬರುವ ಎಲ್ಲ ಪಾತ್ರಗಳನ್ನು ತೆರೆ ಮೇಲೆ ತರಲು ಸಾಧ್ಯವಿಲ್ಲ. ಹಾಗಾಗಿ ಕೆಲವೊಂದು ಬದಲಾವಣೆಗಳು ನಿರ್ದೇಶಕರಿಗೆ ಅನಿವಾರ್ಯವಾಗುತ್ತದೆ. ಸಾಹಿತ್ಯಕೃತಿಯ ಮೌಲ್ಯವನ್ನು ಮತ್ತಷ್ಟು ಹೆಚ್ಚು ಮಾಡಲು ಈ ರೀತಿಯಾದರೂ ರೂಪಾಂತರವು ಕೂಡ ಅತ್ಯಂತ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತದೆ. ಕೆಲವೊಂದು ಮೌಲ್ಯಯುತ ಕೃತಿಗಳು ಈ ರೀತಿಯಾದ ಬದಲಾವಣೆಯ ಹಂತಕ್ಕೆ ಬಂದಾಗ ಸಾಹಿತ್ಯವು ಎಲ್ಲರನ್ನು ಮುಟ್ಟುವಂತಹ ಪ್ರಯತ್ನ ಮಾಡುತ್ತದೆ. ಆಲನಹಳ್ಳಿಯವರ ಮೂರು ಕಾದಂಬರಿಗಳು ಬೇರೆ ರೀತಿಯಲ್ಲಿ ಮೌಲ್ಯಯುತವಾಗಿರುವಂತಹವು. ಅವು ಸಿನಿಮಾಗಳಾಗಿಯೂ ಕೂಡ ಜನಮನರ ಸೂರೆಗೊಂಡಿರುವುದು ಅತ್ಯಂತ ಸಂತೋಷದ ವಿಚಾರವಾಗಿದೆ. ಈ ರೀತಿಯ ಕಾರ್ಯಗಳು ಇನ್ನು ಮುಂದೆ ಕೂಡ ನಡೆಯಬೇಕಿದೆ. ಸಾಹಿತ್ಯ ಮತ್ತು ಸಿನಿಮಾದ ಸಂಬಂಧ ಬೆಳೆಯಬೇಕಾಗಿರುವ ಅನಿವಾರ್ಯತೆ ಇದೆ.

**ಟಿಪ್ಪಣಿಗಳು**

1. ಶ್ರೀ ಕೃಷ್ಣ ಆಲನಹಳ್ಳಿ ವಾಚಿಕೆ.ಸಂಪಾದಕರು–ವಿವೇಕ್ ಶಾನಭಾಗ. ಪುಟ–8 2010
2. ಶ್ರೀ ಕೃಷ್ಣ ಆಲನಹಳ್ಳಿ ವಾಚಿಕೆ.ಸಂಪಾದಕರು–ವಿವೇಕ್ ಶಾನಭಾಗ. ಪುಟ–8 2010
3. ಕಾಡು.ಸತ್ವಶಾಲಿ ಬರವಣಿಗೆ.ಪ್ರಜಾವಾಣಿ (ಲೇಖನ) ಭಾನುವಾರ 23–04–1972
4. ಶ್ರೀ ಕೃಷ್ಣ ಆಲನಹಳ್ಳಿ ವಾಚಿಕೆ.ಸಂಪಾದಕರು–ವಿವೇಕ್ ಶಾನಭಾಗ. ಪುಟ–9 2010
5. ಶ್ರೀ ಕೃಷ್ಣ ಆಲನಹಳ್ಳಿ ವಾಚಿಕೆ.ಸಂಪಾದಕರು–ವಿವೇಕ್ ಶಾನಭಾಗ. ಪುಟ–10 2010

# ಅಧ್ಯಾಯ-5

# ಸಮಾರೋಪ

ಕನ್ನಡ ಸಾಹಿತ್ಯ ಮತ್ತು ಕನ್ನಡ ಸಿನಿಮಾದ ಅವಿನಾಭಾವ ಸಂಬಂಧವನ್ನು ಗುರ್ತಿಸುವ ಪ್ರಯತ್ನವೇ ಈ ಅಧ್ಯಯನದ ಮಹತ್ವಕಾಂಕ್ಷೆಯಾಗಿದೆ. ಸಾಹಿತ್ಯ ಸೃಷ್ಟಿಯ ಕ್ರಿಯೆಯ ಮುಖಾಂತರ ಸಮಾಜದಲ್ಲಾಗುವ ಪರಿವರ್ತನೆಗಳು ಹಲವು ರೀತಿಯದ್ದು. ಅದೇ ರೀತಿ ಸಾಹಿತ್ಯಕೃತಿಯನ್ನು ಆಧಾರಿತ ಚಲನಚಿತ್ರದ ಪರಿಣಾಮವು ಪ್ರಭಾವಶಾಲಿಯಾದದ್ದೆ. ಆ ಕಾರಣಕ್ಕೆ ಸಮಾಜಮುಖಿ ಅಧ್ಯಯನಗಳು ನಮ್ಮೊಂದಿಗೆ ನಡೆಯಬೇಕಾದ ಅನಿವಾರ್ಯತೆ ಇದೆ. ಒಂದು ಸಮಾಜದಲ್ಲಿ ಹಲವಾರು ಪ್ರಕ್ರಿಯೆಗಳು ಕಾಣಸಿಗುತ್ತವೆ. ಅಂತಹ ಪ್ರಕ್ರಿಯೆಗಳಲ್ಲಿ ಕಲೆ, ಸಾಹಿತ್ಯವು ಅತ್ಯುನ್ನತ ಸ್ಥಾನ ಪಡೆದಿವೆ. ಚಲನಚಿತ್ರ ಎಂಬಂತಹ ಕಲಾ ಪ್ರಕಾರ ಜನರಲ್ಲಿ ಬೇಗ ಆಲೋಚನೆಗಳನ್ನು ತರಬಲ್ಲದು. ಆಕಾರಣಕ್ಕೆ ಸಿನಿಮಾ ಕ್ಷೇತ್ರ ಇಂದಿಗೂ ನಮ್ಮ ನಡುವೆ ಉಳಿದಿರುವುದನ್ನು ಕಾಣಬಹುದು.

ಸಾಹಿತ್ಯ ಕ್ಷೇತ್ರದ ಜೊತೆ ಜೊತೆಗೆ ತನ್ನ ಸಂಬಂಧವನ್ನು ಏರ್ಪಡಿಸಿಕೊಂಡು ಬರುತ್ತಿರುವ ಚಲನಚಿತ್ರ ಕ್ಷೇತ್ರವು, ಅತ್ಯಂತ ಪರಿಣಾಮ ಕಾರಿ ವಿಚಾರಗಳನ್ನು ಸಿನಿಮಾದ ಮೂಲಕ ನೀಡುತ್ತಿದೆ. ಇಂದು ಚಲನಚಿತ್ರದ ಬೆಳವಣಿಗೆಯನ್ನು ಗಮನಿಸಿದರೆ ಯಾವ ರೀತಿಯಾದ ಪ್ರಕ್ರಿಯೆಗಳು ನಮ್ಮಲ್ಲಿ ಉಂಟಾಗುತ್ತಿವೆ ಎಂಬುದು ಅರ್ಥ ಮಾಡಿಕೊಳ್ಳಬಹುದು. ಇಂದು ಪ್ರತಿಯೊಂದು ಚಿತ್ರದಲ್ಲೂ ಸಹ ಸಮಾಜದ ಬೆಳವಣಿಗೆ ಪೂರಕವಾದ ಸಂದೇಶಗಳನ್ನು ನೀಡುವ ಚಿತ್ರಗಳಾಗಿರದೆ, ಕೇವಲ ಮನರಂಜನೆಯ ಉದ್ದೇಶವಿರುವ ಹಾಗೂ ತಾನು ಚಲನಚಿತ್ರ ನಿರ್ಮಿಸಲು ಹಾಕಿರುವ ಬಂಡವಾಳ ವಾಪಸ್ಸು ಬಂದು ಲಾಭ ಮಾಡಿಕೊಳ್ಳುವುದು ಅತ್ಯಂತ ಯಶಸ್ವಿಯ ಕರ್ತವ್ಯ ಎನ್ನುವ ಸ್ಥಿತಿ ನಿರ್ಮಾಣವಾಗಿದೆ. ಕಾಲದಿಂದ ಕಾಲಕ್ಕೆ ಬದಲಾಗುತ್ತಿರುವ ಸಂದರ್ಭದಲ್ಲಿ ಸಮಾಜಮುಖಿ ಧೋರಣೆಗಳು ಇಲ್ಲವಾಗುತ್ತಿವೆ. ಇಂತಹ ರೀತಿಯ ವಿಚಾರಗಳು ನಮ್ಮ ನಡುವೆ ಕಾಣುತ್ತಿವೆ. ಪ್ರೇಕ್ಷಕನ ಅಭಿರುಚಿಯು ಇಂದು ಬದಲಾಗುತ್ತಿರುವ ಕಾಲಘಟ್ಟಕ್ಕೆ ಸಿನಿಮಾ ಕ್ಷೇತ್ರವು ಬದಲಾಯಿಸಿಕೊಳ್ಳುತ್ತಿವೆ. ಹಾಗೆ 'ಸಂತೆಯ ಸಮಯಕ್ಕೆ ಮೂರು ಮೊಳ ಹೂವು' ಎಂಬ ಗಾದೆಯಂತೆ ಆತುರದಲ್ಲಿ ಸದಭಿರುಚಿ ಇಲ್ಲದ, ಜನರಿಗೆ ಸಂದೇಶಗಳನ್ನು ನೀಡದ ಚಿತ್ರಗಳು ಆಗಿಂದಾಗ್ಗೆ ನುಗ್ಗಿ ಬರುತ್ತಿವೆ. ಇಂತಹ ಚಲನಚಿತ್ರಗಳು ಸಮಾಜದ ಮೇಲೆ ನಕಾರಾತ್ಮಕ ಪರಿಣಾಮಗಳನ್ನು ಬೀರುವುದರಲ್ಲಿ ಎರಡು ಮಾತಿಲ್ಲ. ಆದರೆ ಒಂದೊಂದು ಕಾಲಘಟ್ಟಗಳಲ್ಲಿ ಬದಲಾಗುತ್ತಾ ಇಂದು ಬರುತ್ತಿರುವ ಚಿತ್ರಗಳು ಮೌಲ್ಯವರ್ಧಿತ ಸಿನಿಮಾಗಳನ್ನು ಸ್ವೀಕರಿಸುವ, ಇಷ್ಟವಾಗದಿದ್ದರೆ ತಿರಸ್ಕರಿಸುವ ಕ್ರಮ ನಡೆಯುತ್ತಿದೆ.

ಕನ್ನಡ ಚಿತ್ರರಂಗದಲ್ಲೇ ಇಂದು ವರ್ಷಕ್ಕೆ ನೂರಾರು ಚಿತ್ರಗಳು ತಯಾರಾಗುತ್ತಿವೆ. ಅವುಗಳಲ್ಲಿ ಬೆರಳೆಣಿಕೆಯಷ್ಟು ಚಿತ್ರಗಳು ಮಾತ್ರ ಉತ್ತಮ ಕತೆ, ನಿರೂಪಣೆ, ಸಂದೇಶಗಳಿಂದ ಜನರನ್ನು ಆಕರ್ಷಿಸುತ್ತವೆ. ಮಿಕ್ಕ ಚಿತ್ರಗಳನ್ನು ಪ್ರೇಕ್ಷಕರು ಸಾರಾಸಗಟಾಗಿ ತಿರಸ್ಕಾರ ಮಾಡುತ್ತಿದ್ದಾನೆ.

ಒಂದು ಕಾಲದಲ್ಲಿ ಸಾಹಿತ್ಯ ಕೃತಿಯಾಧಾರಿತ ಸಿನಿಮಾಗಳು ಎಲ್ಲಾ ರೀತಿಯ ಪ್ರೇಕ್ಷಕರನ್ನು ಹತ್ತಿರ ಸೆಳೆಯುತ್ತಿದ್ದವು. ಪುಟ್ಟಣ್ಣ ಕಣಗಾಲ್, ಸಿದ್ದಲಿಂಗಯ್ಯ, ಎನ್.ಲಕ್ಷ್ಮೀನಾರಾಯಣ್, ಟಿ.ವಿ. ಠಾಕೂರ್ ಸಿಂಗ್, ರಾಜೇಂದ್ರ ಸಿಂಗ್‌ಬಾಬು, ದೊರೆ ಭಗವಾನ್ ಹೀಗೆ ಸಾಲು ಸಾಲು ನಿರ್ದೇಶಕರು ಸಾಹಿತ್ಯ ಪ್ರಕಾರಗಳಾದ ಕತೆ, ಕಾದಂಬರಿ, ನಾಟಕ ಎಲ್ಲ ರೀತಿಯ ಕೃತಿಗಳನ್ನು ಚಲನಚಿತ್ರಗಳಾಗಿ ರೂಪಿಸಿ ಜನರ ಮನ್ನಣೆ ಪಡೆಯುತ್ತಿದ್ದರು. ಅಂದು ಅಂತಹ ಚಿತ್ರಗಳು ಯಶಸ್ವಿಯು ಆಗುತ್ತಿದ್ದವು. ವ್ಯಾಪಾರಿ ಚಿತ್ರಗಳಾಗಿ ಅವುಗಳಲ್ಲಿ ಪ್ರೇಕ್ಷಕರಿಗೆ ಬೇಕಾದ ಮಸಾಲೆ ಅಂಶಗಳು ಒಳಗೊಂಡಿದ್ದು ಪ್ರೇಕ್ಷಕರನ್ನು ರಂಜಿಸುವ ಜೊತೆಗೆ ಸಮಾಜಮುಖಿಯಾದ ಕಾರ್ಯ ಕ್ಷೇತ್ರದೊಂದಿಗೆ ಚಲನಚಿತ್ರ ನಿರ್ಮಾಣವಾಗಿತ್ತು. ಆದರೆ ಕಾಲ ನಂತರ ಪ್ರೇಕ್ಷಕರ ಆಲೋಚನೆಗಳು, ಕಾಲಘಟ್ಟ, ಸಿನಿಮಾವನ್ನು ಸ್ವೀಕರಿಸುವ ಬಗೆ ಎಲ್ಲವು ಬದಲಾಗಿ, ಕೇವಲ ಒಂದು ರೀತಿಯ ಮಾನದಂಡಗಳಿಗೆ ಸಿನಿಮಾ ಕ್ಷೇತ್ರ ಬಂದು ನಿಂತಿರುವುದನ್ನು ಕಾಣುತ್ತೇವೆ. ಇಂದು ಸಹ ಸಾಹಿತ್ಯ ಕೃತಿಯನ್ನು ಆಧಾರಿತ ಚಲನಚಿತ್ರಗಳು ನಿರ್ಮಾಣವಾಗುತ್ತಿದ್ದರು. ಯಾವುದಾದರೂ ಸಾಹಿತ್ಯ ಕೃತಿಯನ್ನು ಆಧರಿಸಿದ ಸಿನಿಮಾ ಇಂದು ಸೃಷ್ಟಿಯಾದರೆ ಅದನ್ನು 'ಕಲಾತ್ಮಕ' ಚಿತ್ರ ಎಂದೋ, 'ಸದಭಿರುಚಿ'ಯ ಚಿತ್ರವೆಂದೋ ಅಥವಾ 'ಗಂಭೀರ' ಸಿನಿಮಾಗಳೆಂದೂ ವಿಭಾಗಿಸುವ ಮಟ್ಟಿಗಿನ ಸ್ಥಿತಿ ನಿರ್ಮಾಣವಾಗಿದೆ. ಆ ರೀತಿಯ ಚಿತ್ರಗಳೆಲ್ಲವು ಮನರಂಜನೆಯ ಉದ್ದೇಶಗಳಲ್ಲದೆ ಗಂಭೀರ ವಿಚಾರಗಳನ್ನು ವಿಶ್ಲೇಷಿಸುವ ಪ್ರಯತ್ನವಾಗುತ್ತಿವೆ. ಇಂದು ಸಾಹಿತ್ಯ ಕೃತಿಯನ್ನು ಆಧಾರಿತ ಚಿತ್ರವೆಂದರೆ ಸರ್ಕಾರದಿಂದ ಸೌಲಭ್ಯ ಪಡೆಯುವ, ಪ್ರಶಸ್ತಿಗೆ ಅರ್ಹವಾಗಿರುವ ಚಿತ್ರಗಳು ಎಂಬಂತಹ ಮಾತು ಜನರ ನಡುವೇ ಗಾಢವಾಗಿ ನೆಲೆಯೂರಿವೆ. ಅದಕ್ಕೆ ಕಾರಣಗಳು ಇವೆ. ಅವೇನೆಂದರೆ, ಇಂದು ಸಾಹಿತ್ಯ ಕೃತಿಯನ್ನಾಧರಿಸಿ ಚಲನಚಿತ್ರ ನಿರ್ಮಾಣವಾದರೆ, ಅವುಗಳನ್ನು ಯಾವುದಾದರು 'ಚಲನಚಿತ್ರೋತ್ಸವಗಳಲ್ಲಿ' ಹಾಗೂ ಮಹಾನಗರಗಳ 'ಮಾಲ್'ಗಳಲ್ಲಿ ಮಾತ್ರ ಪ್ರದರ್ಶನವಾಗುತ್ತಿವೆ. ಅವುಗಳನ್ನು ತಾಲ್ಲೂಕ್, ಹೋಬಳಿ ಮಟ್ಟದ ಚಿತ್ರಮಂದಿರಗಳಲ್ಲಿ ಪ್ರದರ್ಶಿಸುವ ಪ್ರಯತ್ನ ಚಿತ್ರರಂಗದಿಂದ ಸಾಧ್ಯವಾಗುತ್ತಿಲ್ಲ. ಗಿರೀಶ್ ಕಾಸರವಳ್ಳಿಯಂತಹ ಸೃಜನಶೀಲ ನಿರ್ದೇಶಕರು ಇಂತಹ ವಿಚಾರಗಳಿಗೆ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾರೆ. ಕಾರಣಗಳು ಕೇಳಿದರೆ ಪ್ರೇಕ್ಷಕ ಅಂತಹ ಸಿನಿಮಾಗಳನ್ನು ನೋಡುತ್ತಿಲ್ಲ. ಚಲನಚಿತ್ರವನ್ನು ಚಿತ್ರಮಂದಿರದಲ್ಲಿ ಬಿಡುಗಡೆ ಮಾಡಿದರೆ ನಿರ್ಮಾಪಕರಿಗೆ ಥಿಯೇಟರ್‌ನ ಬಾಡಿಗೆ ಕಟ್ಟಲು ಸಹ

ಸಧ್ಯವಾಗುವುದಿಲ್ಲ ಎಂಬ ವಿಷಾದವನ್ನು ವ್ಯಕ್ತಪಡಿಸುತ್ತಾರೆ. ಹಾಗಾಗಿ ಯಾವುದೇ ರೀತಿಯ ಸಾಹಿತ್ಯಕೃತಿ ಆಧಾರಿತ ಚಿತ್ರವು ಪ್ರೇಕ್ಷಕರಿಗೆ ಮುಟ್ಟಿಸಲು ಸಾಧ್ಯವಾಗುತ್ತಿಲ್ಲ ಎಂದು ಹೇಳುತ್ತಾರೆ.

ಸಮಾಜ ಮುಖಿಯಾದಂತಹ ಚಲನಚಿತ್ರಗಳು ಪ್ರೇಕ್ಷಕ ನೋಡುವಂತೆ ಮಾಡಬೇಕಾದ ಅನಿವಾರ್ಯತೆ. ಜವಾಬ್ದಾರಿ ಚಿತ್ರರಂಗದ ಮೇಲೆ ಇದೆ. ಚಲನಚಿತ್ರ ಎನ್ನುವುದು ನಿರ್ಮಾಣವಾಗುವುದೇ ಜನರು ನೋಡಲಿ ಎನ್ನುವ ಕಾರಣಕ್ಕೆ ಜನರೇ ನೋಡಿಲ್ಲ ಎಂದರೆ ಸಿನಿಮಾ ನಿರ್ಮಾಣವಾಗುವಂತಹ ಅವಶ್ಯಕತೆಯಾದರೂ ಏನಿದೆ? ಹಾಗಾಗಿ ವಾಣಿಜ್ಯ ಮತ್ತು ಕಲಾತ್ಮಕ ಎಂಬ ಭೇದವಿಲ್ಲದೆ ಜನರನ್ನು ಸೆಳೆಯಬಲ್ಲ ಚಿತ್ರಗಳು ಬರಬೇಕಿದೆ. ಸಾಹಿತ್ಯಕೃತಿಗಳಾಧಾರಿತ ಚಿತ್ರಗಳು ವ್ಯಾಪಾರಿ ಚಿತ್ರಗಳ ಭಾಷೆಯಲ್ಲಿ ತಯಾರಾಗಿ ಜನಮನ್ನಣೆ ಪಡೆಯಬೇಕಾದ ತುರ್ತು ಬರಬೇಕಾಗಿದೆ.

ಕುವೆಂಪುರವರ ಮಲೆಗಳಲ್ಲಿ 'ಮದುಮಗಳು' ಎಂಬ ಬೃಹತ್ ಕಾದಂಬರಿಯನ್ನು ಕೆ.ವೈ.ನಾರಾಯಣಸ್ವಾಮಿಯವರು ರಂಗರೂಪನೀಡಿ. ಸಿ.ಬಸವಲಿಂಗಯ್ಯನವರ ನಿರ್ದೇಶನದಲ್ಲಿ ಮೂಡಿಬಂದ ನಾಟಕ ಬೆಂಗಳೂರಿನಲ್ಲಿ ಅದ್ಭುತ ಯಶಸ್ಸನ್ನು ಪಡೆದಿದೆ. ಅಹೋರಾತ್ರಿ 9 ಗಂಟೆಗಳ ಪ್ರದರ್ಶನಕ್ಕೆ ಪ್ರೇಕ್ಷಕ ಕೂತು ನೋಡುತ್ತಾನೆ ಎಂದರೆ ನಿಜವಾಗಿಯೂ ಉತ್ತಮವಾದ ಕಲಾಕೃತಿಯನ್ನು ಪ್ರೇಕ್ಷಕರ ಮುಂದೆ ಇಟ್ಟಾಗ ಖಂಡಿತ ಸ್ವೀಕರಿಸುತ್ತಾನೆ ಎಂಬುದಕ್ಕೆ ಕಾದಂಬರಿಯಾಧಾರಿತ ಈ ನಾಟಕವೇ ಸಾಕ್ಷಿಯಾಗಿದೆ. ಜಾನಪದ ಕಥನವಾದ 'ಭಾಗೀರಥಿ' ಎಂಬ ಚಿತ್ರ ನೂರುದಿನಗಳ ಪ್ರದರ್ಶನವನ್ನು ಕಂಡಿದೆ. ಅಗ್ನಿ ಶ್ರೀಧರ್‌ರವರ ಕಾದಂಬರಿ ಆಧಾರಿತ 'ಎದೆಗಾರಿಕೆ' ಎಂಬ ಚಿತ್ರ 50 ದಿನಗಳಗೂ ಮೇಲ್ಪಟ್ಟು ಪ್ರದರ್ಶನಕಂಡಿದೆ. ಹಾಗೆ ನಾಗತಿಹಳ್ಳಿ ಚಂದ್ರಶೇಖರ್ ಕಥೆ ಆಧಾರಿತ 'ಪುಟ್ಟಕ್ಕನ ಹೈವೆ' 50 ದಿನಗಳ ಯಶಸ್ವಿ ಪ್ರದರ್ಶನ ಕಂಡಿರುವುದು ಉತ್ತಮವಾದ ಚಿತ್ರಗಳನ್ನು ನೀಡಿದರೆ ಪ್ರೇಕ್ಷಕ ಸ್ವೀಕರಿಸುತ್ತಾನೆ ಎಂಬುದಕ್ಕೆ ಇವು ನಿದರ್ಶನಗಳಾಗಿವೆ. ಪ್ರೇಕ್ಷಕ ಚಲನಚಿತ್ರವನ್ನು ನೋಡುತ್ತಿಲ್ಲ ಎಂಬುದರ ಬದಲಾಗಿ. ಅವರಿಗೆ ಸರಿಯಾದ ಚಿತ್ರಗಳು ಸೃಷ್ಟಿ ಮಾಡುತ್ತಿದ್ದೇವೆ ಎಂಬ ಪ್ರಶ್ನೆಯನ್ನು ಚಲನಚಿತ್ರ ಕ್ಷೇತ್ರ ಹಾಕಿಕೊಳ್ಳಬೇಕಿದೆ.

ಶ್ರೀ ಕೃಷ್ಣ ಆಲನಹಳ್ಳಿಯವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅತ್ಯಂತ ಮೇಲ್ಮಟ್ಟದ ಕೃಷಿ ಮಾಡಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಭಾಷೆಯಲ್ಲಿ ಹೊಸ ನಾವಿನ್ಯತೆಯನ್ನು. ಹೊಸ ಮೊನಚನ್ನು ದೊರಕಿಸಿ ಕೊಟ್ಟ ಲೇಖಕ ಶ್ರೀಕೃಷ್ಣ ಆಲನಹಳ್ಳಿ. ಕಾವ್ಯ. ಕಾದಂಬರಿ. ಕಥಾ ಸಾಹಿತ್ಯದಲ್ಲಿ ತಮ್ಮ ಪ್ರತಿಭೆಯನ್ನು ಮೆರೆದವರು ನಲವತ್ತ ನಾಲ್ಕನೆಯ ವಯಸ್ಸಿಗೆ ಕಾಡಿನ ಆಳುಕೂಗಿನ ಕಾಡಿನ ಹಕ್ಕಿಯ ಕೂಗಿಗೆ ಓಗೊಟ್ಟರು. ಚಿಕ್ಕವಯಸ್ಸಿನಲ್ಲಿಯೇ ತಮ್ಮ ಚಿಂತನೆಗ ಸ್ವರೂಪವನ್ನು ಕೊಟ್ಟು ಕೃತಿಗಳಾಗಿ ಹೊರಬಂದಾಗ ಕನ್ನಡ ಸಾಹಿತ್ಯವೇ ರೋಮಾಂಚನದಿಂದ

ಪುಳಕಗೊಳ್ಳುವಂತೆ ಮಾಡಿದರು. ಅಷ್ಟೇನೂ ಮಾಗಿದ ವಯಸ್ಸನ್ನು ಕಾಣದ ಇವರಲ್ಲಿ ಅತಿಯಾದ ಆತ್ಮವಿಶ್ವಾಸ ಹಾಗು ಕ್ರಮವಲ್ಲದ ಮಹತ್ವಾಕಾಂಕ್ಷೆಯ ಆರ್ಭಟಗಳೆರಡು ಸೇರಿ ಕೃಷ್ಣರವರು ತೀರಿಕೊಳ್ಳುವ ಮೊದಲೇ ಅವರಲ್ಲಿದ್ದ ಲೇಖಕನು ತನ್ನ ಅಳಿವನ್ನು ಕಂಡುಕೊಂಡನೇ ಎಂಬ ಸಂದೇಶ ಕಾಡುತ್ತದೆ. ವಯಸ್ಸಿನಲ್ಲಿ ಮಾಗಿದ ಪ್ರಭುದ್ಧತೆಯನ್ನು ಪಡೆಯುವ ಮುನ್ನವೇ ತೀರಿಕೊಂಡರು. ಬಾಲ್ಯ ಮತ್ತು ಯೌವ್ವನದ ಘಟ್ಟಗಳನ್ನು ಕಂಡ ಕೃಷ್ಣರವರು ಮನುಷ್ಯನ ಅಂತರಂಗ, ಬಹಿರಂಗದ ಚಹರೆಗಳನ್ನು ತೋರಿಸುತ್ತಾರೆ. ಈ ಚಹರೆಗಳಲ್ಲಿ ಅವರ ತಳುಕುಗಳು, ವೇಷಗಳು, ಬದುಕಿನ ಅಶಿಸ್ತು, ಕಾಲದ ಸ್ಥಿತ್ಯಂತರಗಳಿಂದ ಬದಲಾಗುತ್ತಿರುವ ಅವನ ವೈಯಕ್ತಿಕ ತುಡಿತಗಳು, ಆತ್ಮಶೋಧನೆಯ ಪ್ರಾಮಾಣಿಕತೆಯನ್ನು ಕಥೆ, ಕಾದಂಬರಿಗಳಲ್ಲಿ ಕಟ್ಟಿಕೊಡುವಲ್ಲಿ ಯಶಸ್ವಿಯಾದರು.

ಇವರ ಕಾದಂಬರಿಗಳು ಬೇರೆ ಬೇರೆ ವಿಭಿನ್ನ ವಿಚಾರಗಳನ್ನು ವಿಶ್ಲೇಷಿಸುವ, ಅರ್ಥೈಸುವ ಕ್ರಿಯೆಗೆ ತೊಡಗಿದ್ದವು. ಆಧುನಿಕತೆ ಪ್ರವಹಿಸುವಿಕೆ ಎಂಬುದು ಮನುಷ್ಯ ಲೋಕದಲ್ಲಿ ಏರ್ಪಟ್ಟಂತಹ ಸಂದರ್ಭದಲ್ಲಿ ಏನೆಲ್ಲ ಬದಲಾವಣೆಗಳಾಗುತ್ತವೆ ಎಂಬ ಸಾಮಾನ್ಯ ವಿಚಾರಧಾರೆ ಅವರ ಮೂರು ಕಾದಂಬರಿಗಳಲ್ಲು ಕಾಣುತ್ತವೆ. ಆಧುನಿಕತೆಯ ಸ್ಪರ್ಷವಿಲ್ಲದ ಗ್ರಾಮ ಆಧುನಿಕತೆಯ ಆಗಮನದೊಂದಿಗೆ ಯಾವ ರೀತಿಯ ಮಾರ್ಪಾಡುಗಳನ್ನು ಏರ್ಪಡಿಸಿಕೊಳ್ಳುತ್ತದೆ. ಅದರ ಮುಖಾಂತರ ಸಮಾಜದಲ್ಲಾಗುವ ಸ್ಥಿತ್ಯಂತರಗಳೇನು ಎಂಬುದನ್ನು ಅರ್ಥಪೂರ್ಣವಾಗಿ ಚಿತ್ರಿಸುವ ಕಾರ್ಯ ಯಶಸ್ವಿಯಾಗಿ ಆಲನಹಳ್ಳಿಯವರಲ್ಲಿ ಸಾಗಿದೆ. ಮೂರು ಕಾದಂಬರಿಗಳು ಬೇರೆ ಬೇರೆ ವಿಷಯಗಳನ್ನು ಚರ್ಚಿಸಿದರೆ ಅವುಗಳ ಮೂಲ ಸ್ವರೂಪ ಇರುವುದು 'ಆಧುನಿಕತೆಯ' ಆಗಮನದಲ್ಲಿ ಎಂಬುದು ಸ್ಪಷ್ಟವಾಗುತ್ತದೆ. ಮೂರು ಕಾದಂಬರಿಗಳಲ್ಲಿ ಕಥಾನಾಯಕ ಅಥವ ನಾಯಕಿ ದುರಂತದ ಸಾವಿಗೆ ಒಳಗಾಗುವ ಚಿತ್ರಗಳನ್ನು ನೀಡಿದ್ದಾರೆ. ಆಧುನಿಕತೆ ಎನ್ನುವುದು ಮನುಷ್ಯಲೋಕದ ಅಧಃಪತನದ ಸಂಕೇತ ಎಂದು ಸೂಚ್ಯವಾಗಿ ವಿವರಿಸಿದ್ದಾರೆ. ಇಂದು ಆಧುನಕತೆಯ ಉತ್ತುಂಗದಲ್ಲಿರುವ ನಮ್ಮೆಲ್ಲರ ಬದುಕು ಯಾವ ರೀತಿಯ ಮಾನದಂಡಗಳಿಗೆ ಒಳಗಾಗಿದೆ ಅದರ ಪರಿಣಾಮಗಳೇನು ಎಂಬುದು ನಮ್ಮ ಕಣ್ಮುಂದಿನ ಸತ್ಯವಾಗಿದೆ. ಹಾಗಾಗಿ ಶ್ರೀ ಕೃಷ್ಣ ಆಲನಹಳ್ಳಿಯವರ ಸಾಹಿತ್ಯ ಯಾವುದೇ ಕಾಲಕ್ಕೂ ಒಪ್ಪಿತವಾಗುವಂತಹ ಅಂಶಗಳನ್ನು ವಿವರಿಸುತ್ತದೆ. ಈ ರೀತಿಯಾದ ಕಥಾಹಂದರಗಳ ಸಿನಿಮಾ ರೂಪಗಳು ಸಹ ಸಾರ್ವಕಾಲಿಕವಾಗಿ ಜನಮನ್ನಣೆ ಒಳಗಾಗುತ್ತಿರುವುದು ಪ್ರಶಂಸನೀಯ ವಿಚಾರವಾಗಿದೆ.

ಶ್ರೀ ಕೃಷ್ಣ ಆಲನಹಳ್ಳಿಯವರ ಸಾಹಿತ್ಯ ಕೃತಿಯನ್ನು ಆಧಾರಿತ ಚಲನಚಿತ್ರಗಳು ಒಂದೊಂದು ಕಾಲಕ್ಕೆ ಭಿನ್ನತೆಯನ್ನು ಮರೆದಿರುವಂತಹ ಚಿತ್ರಗಳಾಗಿವೆ. 'ಕಾಡು' ಕಾದಂಬರಿಯನ್ನು ನಿರ್ದೇಶಿಸಿರುವ ಗಿರೀಶ್ ಕಾರ್ನಾಡರು ಹಲವಾರು ಮಿತಿಗಳಲ್ಲಿ ಸಿನಿಮಾವನ್ನು ಯಶಸ್ವಿಯಾಗಿಸಿದ್ದಾರೆ. ಒಂದಷ್ಟು ಬದಲಾವಣೆಗಳೊಂದಿಗೆ ಉತ್ತಮವಾಗಿ ರೂಪಗೊಂಡ ಚಿತ್ರ 'ಕಾಡು' ಎಷ್ಟೋ ವಿವರಗಳನ್ನು ಸಮರ್ಪಕವಾಗಿ, ಸಂಕ್ಷಿಪ್ತವಾಗಿ ಸಿನಿಮಾ ಮಾಧ್ಯಮಕ್ಕೆ ಅಳವಡಿಸುವ ತಂತ್ರಗಾರಿಕೆ ಈ ಚಿತ್ರದಲ್ಲಿ ಗೆದ್ದಿದೆ. ಕಾದಂಬರಿಯ ಪ್ರತಿ ರೂಪವಾಗಿ ಚಿತ್ರ ತಯಾರಾಗಿರುವುದು ಹೆಮ್ಮೆಯ ವಿಚಾರ ಪ್ರೇಕ್ಷಕ ಅದನ್ನು ಹೇಗೆ ಸ್ವೀಕರಿಸುತ್ತಾನೆ ಎಂಬುದು ಬೇರೆಯ ವಿಚಾರ. ಚಿತ್ರ ಹಣಕಾಸಿನ ವಿಚಾರದಲ್ಲಿ ಲಾಭ ಮಾಡಿದೆಯೇ ಇಲ್ಲವೋ ಅನ್ನುವುದು ಅಮುಖ್ಯವಾಗುತ್ತದೆ. ಮೊದಲು ಚಿತ್ರ ಪ್ರೇಕ್ಷಕರಲ್ಲಿ ಯಾವ ಭಾವನೆಯನ್ನು, ಆಲೋಚನೆಯನ್ನು ಮೂಡಿಸಿದೆ ಎಂಬುದೇ ಮುಖ್ಯ ವಿಚಾರವಾಗುತ್ತದೆ. ಚಿತ್ರದ ಯಶಸ್ಸು ಎನ್ನುವುದು ಚಿತ್ರವೆಷ್ಟು ಲಾಭ ಮಾಡಿದೆ ಎಂದು ಆರ್ಥಿಕತೆಯ ದೃಷ್ಟಿಯಲ್ಲಿ ಲೆಕ್ಕಾಚಾರ ಮಾಡುವುದಕ್ಕಿಂತ ಪ್ರೇಕ್ಷಕರಲ್ಲಿ ಎಷ್ಟರಮಟ್ಟಿಗೆ ಪ್ರಭಾವ ಬೀರಿದೆ ಎಂಬುದೇ ಮುಖ್ಯವಾಗುತ್ತದೆ. ಹಾಗಾಗಿ ಈ ಎಲ್ಲ ದೃಷ್ಟಿಕೋನಗಳಿಂದ ಕಾಡು ಕಾದಂಬರಿಯಾಧಾರಿತ ಚಿತ್ರ ಅತ್ಯಂತ ಯಶಸ್ವಿ ಮತ್ತು ಶ್ರೇಷ್ಟ ಚಿತ್ರಗಳಲ್ಲಿ ಒಂದಾಗಿದೆ.

ಮಾರುತಿ ಶಿವರಾಂ ನಿರ್ದೇಶನದಲ್ಲಿ ಬಂದಂತಹ 'ಪರಸಂಗದ ಗೆಂಡೆತಿಮ್ಮ' ಚಿತ್ರವು ಅದ್ಭುತ ಯಶಸ್ಸು ಪಡೆದ ಚಿತ್ರಗಳ ಸಾಲಿಗೆ ಸೇರಿದೆ. ಕತೆಯ ಶಕ್ತಿಯೇ ಸಿನಿಮಾಕ್ಕೆ ಜಯವನ್ನು ತಂದುಕೊಟ್ಟಿದೆ. ಚಿತ್ರದಲ್ಲಿ ಹಲವಾರು ಬದಲಾವಣೆಗಳು ಮಾಡಿಕೊಂಡು ಸೃಜನಶೀಲ ಕಲಾಕೃತಿಯಾಗಿ ನಿರ್ಮಾಣಮಾಡಿದ್ದಾರೆ. ಕಾದಂಬರಿಯಲ್ಲಿ ಬರುವ ಮುಗ್ಧ, ಪರಸಂಗಗಳನ್ನು ಹೇಳುವ ಗೆಂಡೆತಿಮ್ಮ ಚಿತ್ರದಲ್ಲಿ ಅಷ್ಟು ಪರಿಣಾಮಕಾರಿಯಾಗಿ ಸೃಷ್ಟಿಯಾಗದಿದ್ದರು ತನ್ನ ಮಿತಿಯವೊಳಗೆ ಲೋಕೇಶ್‌ರ ಅಭಿನಯ ಮೆಚ್ಚತಕ್ಕದ್ದೇ ಆಗಿದೆ. ಚಿತ್ರದಲ್ಲಿನ ಎಲ್ಲರ ಅಭಿನಯವು ಉತ್ತಮವಾಗಿದೆ. ಆಧುನಿಕತೆಯ ಆಗಮನದ ಸ್ಪರ್ಷವಿರುವ ಕಥಾಹಂದರವಾಗಿದ್ದು ಸಮಾಜದಲ್ಲಿನ ಬದಲಾವಣೆಗಳನ್ನು, ಏರುಪೇರುಗಳನ್ನು ಕಾದಂಬರಿ ಸೂಕ್ಷ್ಮವಾಗಿ ಚಿತ್ರಿಸುತ್ತದೆ. ಆದರೆ ಚಿತ್ರದಲ್ಲಿ ಆ ಸೂಕ್ಷ್ಮತೆ ಕಂಡುಬರುವುದಿಲ್ಲ. ಅದು ಏನೇ ಆದರು ಅಂದಿನ ಕಾಲಕ್ಕೆ ಜನರನ್ನು ಮುಟ್ಟಿದ ಹೆಗ್ಗಳಿಕೆ ಚಿತ್ರದ್ದು. ಹಣಗಳಿಕೆಯ ವಿಚಾರದಲ್ಲು ಯಶಸ್ವಿಯಾಗಿದೆ. ಕಾದಂಬರಿಯ ನಿರೂಪಣ ಶೈಲಿಯನ್ನು ಚಿತ್ರವು ಉತ್ತಮವಾದ ತಂತ್ರವಾಗಿ ಉಪಯೋಗಿಸಿದೆ. ಜೊತೆಗೆ ಜನಮನ್ನಣೆ ಪಡೆದ ಯಶಸ್ವಿ ಚಿತ್ರವಾಗಿ ಪ್ರೇಕ್ಷಕರ ಪ್ರೀತಿಗೆ ಪಾತ್ರವಾದ ಚಿತ್ರ ಪರಸಂಗದ ಗೆಂಡೆತಿಮ್ಮ ಆಗಿದೆ.

ಲೋಕೇಶ್‌ರವರ ಅಭಿನಯ ಮತ್ತು ಪ್ರಥಮಬಾರಿಗೆ ನಿರ್ದೇಶನದೊಂದಿಗೆ ಮೂಡಿಬಂದ ಚಿತ್ರ ಶ್ರೀಕೃಷ್ಣ ಆಲನಹಳ್ಳಿಯವರ 'ಭುಜಂಗಯ್ಯನ ದಶಾವತಾರಗಳು' ಕಾದಂಬರಿ ಆಧಾರಿತ ಅದೇ ಹೆಸರಿನ ಚಿತ್ರ.

ಉತ್ತಮ ನಿರೂಪಣ ಶೈಲಿಯೊಂದಿಗೆ ನಿರ್ದೇಶನದ ಜವಾಬ್ದಾರಿಯನ್ನು ಅಚ್ಚುಕಟ್ಟಾಗಿ ಲೋಕೇಶ್‌ರವರು ನಿರ್ವಹಿಸಿದ್ದಾರೆ. ಬೃಹತ್ ವಿವರಗಳನ್ನೂ ಒಳಗೊಂಡ ಕಾದಂಬರಿಯನ್ನು ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಉತ್ತಮವಾಗಿ ರೂಪಿಸಿದ್ದಾರೆ. ಕಾದಂಬರಿಯ ವಿಶಿಷ್ಟ ಗ್ರಹಿಕೆಯನ್ನು ಚಲನಚಿತ್ರ ಭಿನ್ನ ರೀತಿಯಲ್ಲಿ ಪ್ರೇಕ್ಷಕರಿಗೆ ಮಾಡಿಸುತ್ತದೆ. ಹಾಗಾಗಿ ಯಾವುದೇ ಸಾಹಿತ್ಯಕೃತಿಯ ಸಿನಿಮಾ ರೂಪ ಅಷ್ಟು ಸುಲಭದ ಮಾತಾಗಿರುವುದಿಲ್ಲ ಎಂಬುದನ್ನು ಎಲ್ಲರು ಒಪ್ಪುವಂತಹದ್ದೆ. ಚಿತ್ರ ಬೇರೆ ಬೇರೆ ಕಾರಣಗಳಿಂದ ಉತ್ತಮ ರೂಪವಾಗಿದೆ. ಒಂದಷ್ಟು ಮಿತಿಗಳು ಸಹ ಚಿತ್ರದ ಜನಪ್ರಿಯತೆಗೆ ತೊಡಕಾಗಿರುವುದು ಸಹ ಸತ್ಯಸಂಗತಿಯಾಗಿದೆ. ನಿರ್ದೇಶಕ, ನಿರ್ಮಾಪಕ, ನಟರಾಗಿ ಲೋಕೇಶ್‌ರವರ ಕಾರ್ಯ ಶ್ಲಾಘನೀಯವಾದದ್ದು ಆರ್ಥಿಕ ವಿಚಾರದಲ್ಲಿ ಚಿತ್ರ ಲಾಭ ಮಾಡಿಕೊಡದೇ ಇದ್ದದ್ದು ದುರಾದೃಷ್ಟಕರ ಸಂಗತಿಯಾಗಿದೆ. ಲಾಭ ನಷ್ಟಗಳನ್ನು ಬದಗಿರಿಸಿ ಚಿತ್ರ ನೋಡಿದರೆ ಅದೊಂದು ಅದ್ಭುತ ಕಲಾಕೃತಿ ಎಂಬುದರಲ್ಲಿ ಯಾವುದೇ ವಾದವಿಲ್ಲ.

ಒಟ್ಟಾರೆಯಾಗಿ ಸಮಾಜದಲ್ಲಿನ ಹಲವಾರು ಸಮಸ್ಯೆಗಳಿಗೆ ಉತ್ತರಗಳನ್ನು ಹುಡುಕುವ ಕ್ರಿಯೆ ಸಾಹಿತ್ಯ ಮತ್ತು ಚಲನಚಿತ್ರ ರೂಪಗಳಿಗಿದೆ. ಇವೆರಡರ ಸಂಬಂಧವು ಗಟ್ಟಿಯಾದಂತೆಲ್ಲ ಸಮಾಜಕ್ಕೆ ತನ್ನದೇ ಆದಂತಹ ಬೆಳವಣಿಗೆಗೆ ಕಾರಣವಾಗುತ್ತದೆ. ಸಾಹಿತ್ಯದ ಕೊಂಡಿಯಾಗಿ ಚಲನಚಿತ್ರ ಮುಂದುವರಿಯಬೇಕಾದ ಅನಿವಾರ್ಯತೆ ಈ ಕ್ಷೇತ್ರಕ್ಕಿದೆ. ಅರ್ಥಮಾಡಿಕೊಂಡು ಹೋಗಬೇಕಾದ ಅನಿವಾರ್ಯತೆಯು ಕೂಡ ಕಂಡುಬರಬೇಕಿದೆ. ಯಾವುದೇ ಒಂದು ಮಾನದಂಡದಲ್ಲಿ ಪ್ರೇಕ್ಷಕರ ಭಾವನೆಗಳನ್ನು ಅಳೆಯುವುದು ತಪ್ಪಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯ ಅಭಿರುಚಿ, ಆಲೋಚನೆಗಳು ಭಿನ್ನವಾಗಿರುತ್ತದೆ. ಅವುಗಳಿಗೆ ಪ್ರತಿಸ್ಪಂದಿಸುವ ಕ್ರಿಯೆಗೆ ಚಲನಚಿತ್ರ ಕ್ಷೇತ್ರ ಮುನ್ನಡೆಯಬೇಕಾಗಿದೆ. ಲಾಂಗು, ಮಚ್ಚು, ಗನ್ನು, ಪ್ರೀತಿ, ಪ್ರೇಮ, ಪ್ರಣಯ, ಹಾಸ್ಯ ಇವೇ ಜನರ ಅಭಿಲಾಷೆಗಳು ಎಂಬುದನ್ನು ಮೊದಲು ಮನಸ್ಸಿನಿಂದ ತೆಗೆಯಬೇಕಿದೆ. ಉತ್ತಮ ಅಭಿರುಚಿಗೆ ಪೂರಕವಾಗಿ ಚಿತ್ರಗಳು ನಿರ್ಮಾಣಗೊಳ್ಳಬೇಕಿವೆ. ಅಂತಹ ಸಾಧ್ಯತೆಗಳನ್ನು ಸೃಷ್ಟಿಸುವ ಅಭಿಲಾಷೆಯೇ ಈ ಅಧ್ಯಯನದ ಉದ್ದೇಶವಾಗಿರುತ್ತದೆ. ಸಾಹಿತ್ಯ ಮತ್ತು ಚಲನಚಿತ್ರದ ಸಂಬಂಧಾಂತರಗಳನ್ನು ವಿಭಿನ್ನ ನೆಲೆಯಲ್ಲಿ ಚರ್ಚಿಸುವ ಪ್ರಯತ್ನವೇ ಈ ಅಧ್ಯಯನವಾಗಿದೆ. ಸಾಹಿತ್ಯಕ್ಷೇತ್ರದಿಂದ ಚಲನಚಿತ್ರ ಕ್ಷೇತ್ರವು ಸ್ಪೂರ್ತಿ ಪಡೆದು ವಿವಿಧ ಬಗೆಯಲ್ಲಿ ಮೇಲಸ್ತರದಲ್ಲಿ ಬೆಳೆಯಬೇಕು. ಅದಃಪತನದ ಹಾದಿಯಲ್ಲಿರುವ ಚಿತ್ರೋದ್ಯಮಕ್ಕೆ ಆಸರೆಯಾಗಿ ಸಾಹಿತ್ಯಕ್ಷೇತ್ರ ನಿಲ್ಲಲು ಸಾಮರ್ಥ್ಯವಿರುವುದರಿಂದ ಅದನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆ ನಮ್ಮಲ್ಲಿರಬೇಕಾಗಿದೆ. ಭಾರತೀಯ ಚಲನಚಿತೋತ್ಸವ ನೂರು ವರ್ಷಗಳು ತುಂಬಿರುವ ಇಂತಹ ಸಂದರ್ಭದಲ್ಲಿ ಕನ್ನಡ ಚಲನಚಿತ್ರ ಕ್ಷೇತ್ರವು ಉನ್ನತಮಟ್ಟದ ಬೆಳವಣಿಗೆಯಾಗಲಿ ಎಂಬುದೇ ನಮ್ಮ ಆಶಯವಾಗಿರುತ್ತದೆ. ಸಾಹಿತ್ಯ ಮತ್ತು

ಸಂಸ್ಕೃತಿಗಳ ಜೊತೆ ಜೊತೆಗೆ ಸಿನಿಮಾ ಕ್ಷೇತ್ರವು ಬೆಳವಣಿಗೆಯಾಗಿದ್ದೇ ಆದಲ್ಲಿ ಕಲಾಪ್ರಕಾರಗಳೆಲ್ಲವು ಔನತ್ಯದ ಸ್ಥಾನ ಪಡೆದುಕೊಳ್ಳವಲ್ಲಿ ಎರಡುಮಾತಿಲ್ಲ. ಹಾಗಾಗಿ ಕನ್ನಡ ಸಾಹಿತ್ಯ ಮತ್ತು ಕನ್ನಡ ಚಲನಚಿತ್ರ ಕ್ಷೇತ್ರ ಜೊತೆ ಜೊತೆಯಲ್ಲಿ ಒಟ್ಟಾಗಿ ಮುನ್ನಡೆದರೆ ಎರಡು ಕ್ಷೇತ್ರದ ಸರ್ವಾಂಗೀಣ ಬೆಳವಣಿಗೆ ಸಾಧ್ಯವಾಗುತ್ತದೆ ಎಂಬ ಆಶಯವನ್ನು ಈ ಅಧ್ಯಯನ ಹೊಂದಿದೆ.

## ಅನುಬಂಧ-1



**ಶ್ರಿ ಕೃಷ್ಣ ಆಲನಹಳ್ಳಿಯವರ ಪರಿಚಯ**

**ಹೆಸರು** : ಶ್ರೀಕೃಷ್ಣ ಆಲನಹಳ್ಳಿ

**ಜನನ** : 03-04-1947

**ನಿಧನ** : 04-01-1989

**ಊರು** : ಆಲನಹಳ್ಳಿ, ಹೆಗ್ಗಡದೇವನ ಕೋಟೆ. ತಾ. ಮೈಸೂರು ಜಿಲ್ಲೆ

**ಕುಟುಂಬ** : ಶ್ರೀಮತಿ ವಿನುತ (ಪತ್ನಿ), ಪ್ರದ್ಯಮ್ನ ಆಲನಹಳ್ಳಿ(ಮಗ) ಕೃತಿಕಾ ಆಲನಹಳ್ಳಿ (ಮಗಳು)

**ವಿದ್ಯಾಭ್ಯಾಸ:** ಎಂ. ಎ (ತತ್ವ ಶಾಸ್ತ್ರ) 1969

**ಉದ್ಯೋಗ** : ಮೈಸೂರು ವಿಶ್ವವಿದ್ಯಾಲಯ ಮತ್ತು ಸೆಂಟ್ರಲ್ ಇನ್ಸ್‌ಟಿಟ್ಯೂಟ್ ಆಫ್ ಇಂಡಿಯನ್ ಲ್ಯಾಂಗ್‌ವೇಜಸ್‌ನಲ್ಲಿ ಉಪನ್ಯಾಸಕ ವೃತ್ತಿ (1969-79)

**ಪ್ರಕಟಿತ ಕೃತಿಗಳು** :

**ಕಾವ್ಯ** : ಮಣ್ಣಿನ ಹಾಡು (1966)

ಕಾಡುಗಿಡದ ಹಾಡುಪದಗಳು (1974)

ಡೋಗ್ರಾ-ಪಹಾಡಿ ಪ್ರೇಮಗೀತೆಗಳು (ಅನು) (1974)

ಪ್ರಕಟಿಸಲಾಗದ ಪದ್ಯಗಳು (1982)

ಆಲನಹಳ್ಳಿ ಕವಿತೆಗಳು (1985)

**ಕಥಾ ಸಂಕಲನ:** ತಪ್ತ (1970)

ಫೀನಿಕ್ಸ್ (1975)

ಸಮಗ್ರ ಕಥೆಗಳು (2000)

ಗೋಡೆ (2000)

**ಕಾದಂಬರಿ :** ಕಾಡು (1972)

ಪರಸಂಗದ ಗೆಂಡೆತಿಮ್ಮ (1978)

ಭುಜಂಗಯ್ಯನ ದಶಾವತಾರಗಳು (1982)

**ಸಂಪಾದನೆ :** ಅವಲೋಕನ (1974)

ಅಂತಃಕರಣ (1974)

ಗ್ರಾಮಾಯಣ ಸಮೀಕ್ಷೆ (1975)

**ಇತರ ಭಾಷೆಗಳಿಗೆ:** ಕಾಡು–ಇಂಗ್ಲೀಷ್, ಹಿಂದಿ, ಮಲಯಾಳಂ, ಮರಾಠಿ, ಗುಜರಾತಿ ಜರ್ಮನ್, ರಷ್ಯನ್

ಪರಸಂಗದ ಗೆಂಡೆತಿಮ್ಮ –ಮಲಯಾಳಂ, ಇಂಗ್ಲೀಷ್

ಭುಜಂಗಯ್ಯನ ದಶಾವತಾರಗಳು–ಮಲೆಯಾಳಂ, ಇಂಗ್ಲೀಷ್

**ಚಲನಚಿತ್ರಗಳಾದ ಕೃತಿಗಳು:** ಕಾಡು, ಫೀನಿಕ್ಸ್, ಪರಸಂಗದ ಗೆಂಡೆತಿಮ್ಮ, ಗೀಜಗನ ಗೂಡು ಕುರುಬರ ಲೆಕ್ಕ, ಭುಜಂಗಯ್ಯನ ದಶಾವತಾರಗಳು

**ಪ್ರಶಸ್ತಿಗಳು :** ಸಾಹಿತ್ಯ ಅಕಾಡೆಮಿ ಪ್ರಶಸ್ತಿ (ಮಣ್ಣಿನ ಹಾಡು–1966)

ಕರ್ನಾಟಕ ಸರ್ಕಾರದ ಬಹುಮಾನ (ಕಾಡು–1970)

'ಕಾಡು' ಚಲನಚಿತ್ರಕ್ಕೆ ರಾಷ್ಟ್ರಪತಿಗಳ ಚಿನ್ನದ ಪದಕ (1974)

'ಪರಸಂಗದ ಗೆಂಡೆತಿಮ್ಮ' ಚಲನಚಿತ್ರಕ್ಕೆ ಕರ್ನಾಟಕ ಸರ್ಕಾರದಿಂದ ಅತ್ಯುತ್ತಮ ಚಲನಚಿತ್ರ ಪ್ರಶಸ್ತಿ (1978)

ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ (1989–ನಿಧನಾನಂತರ)

'ಭುಜಂಗಯ್ಯನ ದಶಾವತಾರಗಳು' ಕರ್ನಾಟಕ ಸರ್ಕಾರದಿಂದ ಉತ್ತಮ ಕಥಾಲೇಖಕ ಚಲನಚಿತ್ರ ಪ್ರಶಸ್ತಿ (1991)

## ಅನುಬಂಧ-2

## ಕಾಡು ಚಲನಚಿತ್ರದ ದೃಶ್ಯಗಳು




ಚಿತ್ರ-1




ಚಿತ್ರ-2

# ಕಾಡು ಚಲನಚಿತ್ರದ ದೃಶ್ಯಗಳು




ಚಿತ್ರ-3




ಚಿತ್ರ-4

# ಪರಸಂಗದ ಗೆಂಡೆತಿಮ್ಮ ಚಲನಚಿತ್ರದ ದೃಶ್ಯಗಳು




ಚಿತ್ರ–5




ಚಿತ್ರ–6

## ಪರಸಂಗದ ಗೆಂಡೆತಿಮ್ಮ ಚಲನಚಿತ್ರದ ದೃಶ್ಯಗಳು




ಚಿತ್ರ-7




ಚಿತ್ರ-8

## ಭುಜಂಗಯ್ಯನ ದಶಾವತಾರಗಳು ಚಲನಚಿತ್ರದ ದೃಶ್ಯಗಳು



ಚಿತ್ರ-9



ಚಿತ್ರ-10

## ಭುಜಂಗಯ್ಯನ ದಶಾವತಾರಗಳು ಚಲನಚಿತ್ರದ ದೃಶ್ಯಗಳು



ಚಿತ್ರ-11



ಚಿತ್ರ-12

ಪ್ರಾಥಮಿಕ ಆಕರಗಳು

1.ಕಾಡು, ಶ್ರೀಕೃಷ್ಣ ಆಲನಹಳ್ಳಿ, , ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು-560002, 2011

2.ಪರಸಂಗದ ಗೆಂಡೆತಿಮ್ಮ, ಶ್ರಿ ಕೃಷ್ಣ ಆಲನಹಳ್ಳಿ, ಡಿ.ವಿ.ಕೆ ಮೂರ್ತಿ ಪ್ರಕಾಶಕರು,ಮೈಸೂರು–58, ಐದನೆ ಮುದ್ರಣ, 1993

3. ಭುಜಂಗಯ್ಯನ ದಶಾವತಾರಗಳು, , ಶ್ರೀ ಕೃಷ್ಣ ಆಲನಹಳ್ಳಿ, ಕನ್ನಡ ಮಸ್ತಕ ಪ್ರಕಾಶನ, ಬೆಂಗಳೂರು–560018

ಮೂರು ಕಾದಂಬರಿಗಳನ್ನು ಆಧಾರಿತ ಚಲನಚಿತ್ರಗಳು

1. .ಕಾಡು, ನಿರ್ದೇಶನ ,ನಿರ್ದೇಶಕರು– ಗೀರಿಶ್ ಕಾರ್ನಾಡ್

2.ಪರಸಂಗದ ಗೆಂಡೆತಿಮ್ಮ, ನಿರ್ದೇಶಕರು–ಮಾರುತಿ ಶಿವರಾಮ್

3. ಭುಜಂಗಯ್ಯನ ದಶಾವತಾರಗಳು, ನಿರ್ದೇಶಕರು–ಲೋಕೆಶ್

## ಪರಮರ್ಶನ ಕೃತಿಗಳು

1.ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ, ಬರಗೂರು ರಾಮಚಂದ್ರಪ್ಪ, ಅಂಕಿತ ಪುಸ್ತಕ, ಬೆಂಗಳೂರು-560004, ಎರಡನೆ ಮುದ್ರಣ,2005

2.ಕನ್ನಡ ಸಿನಿಮಾ,ಇತಿಹಾಸದ ಪುಟಗಳಲ್ಲಿ, ಗಂಗಾಧರ್ ಮೊದಲಿಯಾರ್, ಕನ್ನಡ ಪುಸ್ತಕ ಪ್ರಾಧಿಕಾರ, , ಬೆಂಗಳೂರು-560018, ಮೊದಲ ಮುದ್ರಣ,1998

3.ಲೊಕೇಶ್ ಪರಸಂಗ, ನಿರೂಪಣೆ: ಸುಮನಕಿತ್ತೂರು, ಅಗ್ನಿ ಪ್ರಕಾಶನ, , ಬೆಂಗಳೂರು-560078, ಮೊದಲ ಮುದ್ರಣ,2005

4.ಸಾಹಿತ್ಯ ಕಥನ, ಡಿ,ಆರ್,ನಾಗರಾಜ್,ಕನ್ನಡ ಸಂಸ್ಕೃತಿ ಇಲಾಖೆ, , ಬೆಂಗಳೂರು-560002, 2011

5.ಸಿನಿಮಾ: ಕಲೆ-ನೆಲೆ,ಪ್ರ,ಸಂಪಾದಕರು, ಗಿರೀಶ್ ಕಾಸರವಳ್ಳಿ,ನವಕರ್ನಾಟಕ ಪಬ್ಲಿಕೇಷನ್ಸ್, , ಬೆಂಗಳೂರು-560009,ಮೊದಲ ಮುದ್ರಣ, 1983

6.ಸಿನಿಮಾ-ಸರ್ಕಾರ-ಸಮಾಜ,ಡಿ,ಎಸ್,ನಾಗಭೂಷಣ್, ಪ್ರಸಾರಾಂಗ, , ಬೆಂಗಳೂರು ವಿಶ್ವವಿದ್ಯಾಲಯ, , ಬೆಂಗಳೂರು,1983

7.ಚಿನ್ನದಗರಿ, ಸಂಪಾದಕರು, ಹಾ,ಮ,ನಾಯಕ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, 1978

8.ಸಿನಿಮಾ, ಜಿ,ಕೆ,ರಮೇಶ್, ಉಜ್ವಲ ಪ್ರಕಾಶನ, ಮೈಸೂರು,1986

9.ಕನ್ನಡ ಚಲನಚಿತ್ರ ಸಮಸ್ಯೆಗಳು, ಹುಣಸೂರು ಕೃಷ್ಣಮೂರ್ತಿ,ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, 1978

10.ಸಿನಿಮಾ ಯಂತ್ರ ಭಾಷೆ, ಕೆ,ವಿ,ಸುಬ್ಬಣ್ಣ, ಅಕ್ಷರ ಪ್ರಕಾಶನ ಹೆಗ್ಗೋಡು

11.ಪ್ರಜ್ಞೆ ಮತ್ತು ಪರಿಸರ, ಯು,ಆರ್,ಅನಂತಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-18, 2004

12.ಕಾಡಿನ ಹುಡ್ಗ ಕೃಷ್ಣ (ಶೀಕೃಷ್ಣ ಆಲನಹಳ್ಳಿ ನೆನಪಿನ ಸಂಚಿಕೆ)ಸಂಪಾದಕರು: ಡಿ,ಎಸ್, ನಾಗಭೂಷಣ್,ಸಂವಾದ ಪ್ರಕಾಶನ,ಚಿತ್ರದುರ್ಗ ಮೊದಲಮುದ್ರಣ,1990

13.ಸಂಸ್ಕೃತಿಯ ಸ್ಥಿತ್ಯಂತರಗಳುಮತ್ತು ಶೀಕೃಷ್ಣ ಆಲನಹಳ್ಳಿ ಸಾಹಿತ್ಯ, ವಿಚಾರ ಸಂಕಿರಣಮಾಲೆ,ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು

14.ಟೀಕೆ-ಟಿಪ್ಪಣಿ,ಪಿ, ಲಂಕೇಶ್,ಪತ್ರಿಕಾ ಪ್ರಕಾಶನ ಬೆಂಗಳೂರು, ಮೊದಲ ಮುದ್ರಣ,1991

15.ಪ್ರಭುದ್ದ ಕರ್ನಾಟಕ, ಸಂಪುಟ 54, ಮೈಸೂರು ವಿಶ್ವವಿದ್ಯಾಲಯ

16. ಶೀಕೃಷ್ಣ ಆಲನಹಳ್ಳಿ ವಾಚಿಕೆ, ಸಂ. ವಿವೇಕ್ ಶಾನುಭಾಗ, ಬೆಂಗಳೂರು–560070,ಮೊದಲ ಮುದ್ರಣ, 2010

17.ಕನ್ನಡ ಕಾದಂಬರಿ ಆಧಾರಿತ ಚಲನಚಿತ್ರಗಳ ಅಧ್ಯಯನ(ಪ್ರಾತಿನಿಧಿಕ),ಕೆ.ವಿ, ಮಾನಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–560018, ಮೊದಲ ಮುದ್ರಣ, 2008

18.ಕನ್ನಡದ ಸಂಪತ್ತು, ಸಂ. ಮಂಜುನಾಥ ಅದ್ದೆ, ಕನ್ನಡ ಪ್ರಕಾಶನ, ಬೆಂಗಳೂರು–560070,ಮೊದಲ ಮುದ್ರಣ, 2009

19.ಕನ್ನಡ ಮುತ್ತಿನಕತೆ.ರಾಜ್‌ಕುಮಾರ್, ಬಿ ಗಣಪತಿ, ಸಿನಿಮಾ ಸಾಹಿತ್ಯ ಪ್ರಕಾಶನ ಬೆಂಗಳೂರು–560019,ಮೊದಲ ಮುದ್ರಣ, 2009

20.ಕನ್ನಡ ಸಿನಿಮಾ ಲೋಕ,ಡಾ.ಜಿ.ಪ್ರಶಾಂತ್ ನಾಯಕ್, ರಚನಾ ಪ್ರಕಾಶನ,ಮೈಸೂರು,ಮುದ್ರಣ, 2009

21.ಸಿನಿಮಾ ಮತ್ತು ಪ್ರೇಕ್ಷಕ, ಅಬ್ದುಲ್ ರೆಹಮಾನ್ ಪಾಷ, ನವಕರ್ನಾಟಕ, ಬೆಂಗಳೂರು, ಪ್ರಥಮ ಮುದ್ರಣ.1987

22.ನಕ್ಷೆ ನಕ್ಷತ್ರ, ಡಾ. ಬಸವರಾಜ ಕಲ್ಗುಡಿ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು–560002, 2011

23.ಸಂಸ್ಕೃತಿ ಕಥನ, ಸಂಪಾದಕರು. ಅಗ್ರಹಾರ ಕೃಷ್ಣಮೂರ್ತಿ,, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು–560002, 2006

24.ಉರಿಯ ನಾಲಿಗೆ, ಕೀರ್ತಿನಾಥ ಕುರ್ತುಕೋಟಿ, , ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು–560002, 2006

25.ದೇಶಿಯ ಚಿಂತನ, ಚಂದ್ರಶೇಖರ ಕಂಬಾರ, ಅಂಕಿತ ಪ್ರಕಾಶನ, ಬೆಂಗಳೂರು–560004, ಮೊದಲ ಮುದ್ರಣ,2004

26.ಕನ್ನಡ ಕಥನ ಸಾಹಿತ್ಯ:ಕಾದಂಬರಿ, ಜಿ.ಎಸ್.ಅಮೂರ,ಸ್ವಪ್ನ ಬುಕ್ ಹೌಸ್, ಬೆಂಗಳೂರು–560009,ಮೊದಲ ಮುದ್ರಣ,2006

27.ವಿಮರ್ಶೆಯ ಪರಿಭಾಷೆ, ಓ.ಎಲ್. ನಾಗಭೂಷಣ್, , ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು–560002, 2011

28.ಹೊಸ ವಿಚಾರಗಳು, ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಪುಸ್ತಕ ಪ್ರಕಾಶನ, ಮೈಸೂರು–57009,ಮೊದಲ ಮುದ್ರಣ,2012

29.ಗಾಳಿ ಬೆಳಕು,ನಟರಾಜ್ ಹುಳಿಯಾರ್, ಪಲ್ಲವ ಪ್ರಕಾಶನ, ಬಳ್ಳಾರಿ–583113,ಮೊದಲ ಮುದ್ರಣ,2011